# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಯಾವುದಾದರೊಂದು ವಿದ್ಯೆಯಲ್ಲಿ ನಿಪುಣರಾಗಿರುವವರಿಗೆ ರಾಜಾಶ್ರಯ ಲಭಿಸುವುದುಂಟು. ಯಾವ ವಿದ್ಯೆಯನ್ನೂ ತಿಳಿಯದವನು ದೊಡ್ಡ ದೊಡ್ಡ ಆಶೆಗಳನ್ನು ಮಾತ್ರ ಮನಸ್ಸಿನಲ್ಲಿ ತುಂಬಿಟ್ಟುಕೊಳ್ಳುತ್ತಾನೆ. ಅದರ ಪರಿಣಾಮದಿಂದ ತನಗೆ ತಿಳಿದ ಅಲ್ಪ ವಿದ್ಯೆಯನ್ನೇ ದೊಡ್ಡದೆಂದು ತಿಳಿಯುತ್ತಾನೆ. ಕೆಲವು ಶ್ರೀಮಂತರು ಹೆಮ್ಮೆಗಾಗಿ ನಿಷ್ಪ್ರಯೋಜಕವಾದ ಕಾರ್ಯಕ್ಕೆ ಬಹುಮಾನ ಕೊಡುವುದುಂಟು. ಇಂತಹ ಗುಣವುಳ್ಳವರಿಗೆ ಎಚ್ಚರಿಕೆ ಬರುವಂತೆ ಈ ಸಂಚಿಕೆಯಲ್ಲಿ "ಆಸ್ಥಾನ ತಿಂಡಿಬಾಕ" ಎಂಬ ಚಿಕ್ಕ ಕಥೆಯೊಂದಿದೆ.

## ಅಮರವಾಣಿ

ಧನಾದಿಕೇಷು ವಿದ್ಯನ್ತೇ ಯತ್ರ ಮೂರ್ಖಾ ಸುಖಾಶಯಾ
ತಪ್ತಾ ಗ್ರೀಷ್ಮೇಣ ಸೇವಂತೇ ಶೈತ್ಯಾರ್ಥಂ ತೇ ಹುತಾಶನಮ್

ಕೇವಲ ಧನದಿಂದ ಸುಖಪಡಬಹುದೆಂದು ತಿಳಿಯುವವರು ಮೂರ್ಖರು. ಸುಖಕ್ಕಾಗಿ ಧನವನ್ನು ಕೋರುವುದೆಂದರೆ, ಬೇಸಗೆಯಲ್ಲಿ ತಣ್ಣೀರಿಗಾಗಿ ಬೆಂಕಿಯನ್ನು ಆಶ್ರಯಿಸಿದಂತೆಯೇ.

ಸಂಪುಟ : ೭೫ ನವೆಂಬರ್ '೭೫ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦





# ಚಂದಮಾಮ

ನವೆಂಬರ್ 1985



## ಈ ಸಂಚಿಕೆಯಲ್ಲಿ





ಬಿಡಿ ಪ್ರತಿ ರೂ. ೨-೫೦

ವಾರ್ಷಿಕ ಚಂದಾ ರೂ. ೩೦.೦೦

# ಚಂದಮಾಮನ ಹರಟೆ



## ‘ಹುಲಿರಾಯ’ರಿಗೆ ಏರ್‌ಕೂಲರ್ಸ್‌!

ಈ ವರ್ಷದ ಬೇಸಗೆಯ ಬಿಸಿಲು ದಿಲ್ಲಿಯ ಪ್ರಾಣಿ ಪ್ರದರ್ಶನ ಶಾಲೆಯ ಪ್ರಾಣಿಗಳಿಗೆ ಏನೂ ಮಾಡಲಾಗದೆ ಹೋಯಿತು. ಏಕೆಂದರೆ ಅಲ್ಲಿ ಚಿಕ್ಕ ಚಿಕ್ಕ ಮೃಗಗಳಿಗೂ, ಪಕ್ಷಿಗಳಿಗೂ ಬಿಸಿಲು ತಗಲದ ಹಾಗೆ ಚಪ್ಪರ ಹಾಕಿಸಿದ್ದರು. ಹುಲಿಗಳಿಗೆ ಪಂಕಾ ಏರ್ಪಡಿಸಿದ್ದರು. ಬಿಳೀ ಹುಲಿಗಳಿಗೆ ಪ್ರತ್ಯೇಕವಾಗಿ ಏರ್‌ಕೂಲರ್ಸ್‌ ಇರಿಸಿದ್ದರು!

## ಕಿವುಡರಿಗೆ ಫೋನ್‌!



ಬ್ರಿಟನ್ನಿನ ಎಸ್ಸೆಕ್ಸ್‌ ವಿಶ್ವವಿದ್ಯಾಲಯದಲ್ಲಿ ಕಿವುಡರಿಗೆ ಉಪಯೋಗ ಬೀಳುವ ‘ವಿಜುವಲ್ ಟೆಲಿಫೋನ್’ ರೂಪಿಸಲ್ಪಟ್ಟಿದೆ. ಟೆಲಿಫೋನ್ ಸರಿಗೆಗಳಲ್ಲಿ ಬೊಂಬೆಗಳ ಸಹಾಯದಿಂದ, ಸೈಗೆಗಳನ್ನು ಪ್ರಚಾರ ಮಾಡುವ ಸಾಂಕೇತಿಕ ವಿಧಾನದ ಮೂಲಕ ಇದನ್ನು ತಯಾರಿಸಿದ್ದಾರೆ.



## ಚಾರಿತ್ರಕ ಪೂರ್ವಯುಗ ವಾತಾವರಣ

ಪ್ಯಾರಿಸ್ ನಗರಕ್ಕೆ ೨೦೦ ಕಿ. ಮೀ. ದೂರದಲ್ಲಿರುವ ವೊರ್ವಾನ್ ಪ್ರಾಂತದಲ್ಲಿ ಒಂದು ಚಾರಿತ್ರಕ ಪೂರ್ವಯುಗ ಉದ್ಯಾನವನ್ನು ರೂಪಿಸಲ್ಪಟ್ಟಿದೆ. ಒಂದು ಕಾಲಘಟ್ಟದಲ್ಲಿ ಭೂಮಿಯ ಮೇಲೆ ನಡೆದಾಡಿದ ಡಿನೋಜಾರ್ಸ್‌ನಂತಹ ಪ್ರಾಣಿಗಳ ಶಿಲ್ಪಗಳನ್ನು ಕಾರ್ಡೋಲೀಗಿಟಾನ್ ಎಂಬ ಕಲಾಕಾರನು ತಯಾರು ಮಾಡುತ್ತಿದ್ದಾನೆ. ಜೀವಕಳೆ ತುಂಬಿ ಕಾಣುವ ಈ ಶಿಲ್ಪಗಳನ್ನು ನಿಜವಾದುವೆಂದುಕೊಂಡು ಸುತ್ತುಮುತ್ತಲಿರುವ ಇತರ ಪ್ರಾಣಿಗಳು ಇವುಗಳನ್ನು ಸಮೀಪಿಸಲು ಭಯಪಡುತ್ತವಂತೆ!

# ನಿಮಗೆ ಗೊತ್ತೇ?

೧. ಭೀಮಾ ನದಿಯ ಪ್ರಧಾನ ಉಪನದಿಯಾಗಿರುವ ನದಿ ಯಾವುದೆಂದು ನಿಮಗೆ ಗೊತ್ತಿದೆಯೇ?

೨. ಚಂಬಲ್ ನದಿ ಯಾವ ನದಿಯ ಉಪನದಿ ಎಂದು ತಿಳಿದಿದ್ದೀರಾ?

೩. ಅರೇಬಿಯಾ ಸಮುದ್ರದಲ್ಲಿ ಸಂಗಮಿಸುವ ನದಿಗಳಲ್ಲಿ ದೊಡ್ಡದು ನರ್ಮದಾ, ಹಾಗಾದರೆ ಎರಡನೇ ದೊಡ್ಡ ನದಿ ಯಾವುದೆಂದು ನಿಮಗೆ ಗೊತ್ತೇ?

೪. ಬೀಹಾರ್‌ನಲ್ಲಿ ‘ವಿಷಾದ ನದಿ’ ಎಂದು ಯಾವುದನ್ನು ಕರೆಯುವರೆಂದು ಹೇಳಬಲ್ಲಿರಾ?

೫. ‘ಗಾಂಧೀ ಸಾಗರ್ ಡಾಂ’ ಯಾವ ನದಿಯ ಮೇಲೆ ನಿರ್ಮಿಸಲ್ಪಟ್ಟಿದೆಯೋ ಗೊತ್ತಿದೆಯೇ?

(ಉತ್ತರ ೬೫ ನೇ ಪುಟದಲ್ಲಿ)

**ಪುರಾಣ ಗಾಥಾವಳಿ :**

# ಅಂಬರೀಷ

ಅಂಬರೀಷನೆಂಬ ರಾಜನು ದೊಡ್ಡ ವಿಷ್ಣುಭಕ್ತನಾಗಿದ್ದನು. ಆ ರಾಜನ ಭಕ್ತಿಗೆ ಮೆಚ್ಚಿ ವಿಷ್ಣು ತನ್ನ ಸುದರ್ಶನ ಚಕ್ರವು ಅವನಿಗೆ ರಕ್ಷೆಯಾಗಿರುವಂತೆ ವರ ಕೊಟ್ಟಿದ್ದನು.

ಒಂದು ಸಾರಿ ಅಂಬರೀಷನು ವರ್ಷದುದ್ದಕ್ಕೂ ವ್ರತಾಚರಣೆ ಮಾಡಿದನು. ವ್ರತದ ಕಡೆಯ ಮೂರು ದಿನಗಳವರೆಗೆ ಉಪವಾಸವಿದ್ದು ಕೊನೆಯ ದಿನ ಪೂಜೆ ನಡೆಸಿ ಭೋಜನಕ್ಕೆ ಉಪಕ್ರಮಿಸುವಾಗ ದುರ್ವಾಸ ಮುನಿ ಬಂದು "ಸ್ವಲ್ಪ ತಡೆ, ಸ್ನಾನ ಮಾಡಿ ಬರುತ್ತೇನೆ" ಎಂದು ಹೇಳಿ ನದಿಗೆ ಹೋದನು.

ಆದರೆ ಎಷ್ಟು ಹೊತ್ತಾದರೂ ದುರ್ವಾಸ ಮುನಿ ನದಿಯಿಂದ ಹಿಂದಿರುಗಿ ಬರಲಿಲ್ಲ. ಅಲ್ಲಿದ್ದ ಮುನಿಗಳೂ, ಇತರ ಅತಿಥಿಗಳೂ ಶುಭ ಘಳಿಗೆ ದಾಟಿ ಹೋಗುವುದಕ್ಕೆ ಮೊದಲೇ ಉಪವಾಸ ಮುಗಿಸ ಬೇಕೆಂದು ಅಂಬರೀಷನನ್ನು ಕೇಳಿಕೊಂಡರು. ಗುರುಹಿರಿಯರ ಆದೇಶದಂತೆ ಉಪವಾಸವನ್ನು ಮುಗಿಸಿದ ಸೂಚನೆಯಾಗಿ ಸ್ವಲ್ಪ ತೀರ್ಥ ಪ್ರಾಶನ ಮಾಡಿದನು ಅಂಬರೀಷ.

ಆಗಲೇ ಅಲ್ಲಿಗೆ ಬಂದು ನಡೆದುದನ್ನು ನೋಡಿದ ದುರ್ವಾಸ ಮುನಿ ಕೋಪಾವೇಶದಿಂದ, "ನಾನು ಬರುವುದಕ್ಕೆ ಮೊದಲೇ ಉಪವಾಸವಿರಮಣ ಮಾಡಿ ನನ್ನನ್ನು ಅವಮಾನಿಸುವಿಯಾ ?" ಎಂದು ತನ್ನ ತಲೆಯ ಒಂದು ಜಡೆಯನ್ನು ಎಳೆದು ನೆಲಕ್ಕೆ ಬಡಿದನು. ಆ ಜಡೆಯಿಂದ ಒಬ್ಬ ರಾಕ್ಷಸನು ಹುಟ್ಟಿ, ಅಂಬರೀಷನ ಕಡೆಗೆ ಧಾವಿಸಿದನು. ಅಂಬರೀಷನು ಸುದರ್ಶನ ಚಕ್ರವನ್ನು ಸ್ಮರಿಸಲು, ಮರುಕ್ಷಣದಲ್ಲಿ ವಿಷ್ಣು ಚಕ್ರವು ಬಂದು ರಾಕ್ಷಸನ ತಲೆಯನ್ನು ಕಡಿದು, ದುರ್ವಾಸನ ಕಡೆಗೆ ಬಂತು.

ಇದಿರು ನೋಡದ ಪರಿಣಾಮಕ್ಕೆ ಹೆದರಿದ ದುರ್ವಾಸನು ಓಡುತ್ತಾ ದೇವೇಂದ್ರನ ಬಳಿಗೆ ಹೋಗಿ ಶರಣು ಬೇಡಿದನು. ಅಲ್ಲಿ ಸಾಧ್ಯವಾಗದೆ ಬ್ರಹ್ಮನ ಬಳಿಗೆ ಹೋಗಿ ಬೇಡಿಕೊಂಡನು. ಅಲ್ಲಿಂದ ಶಿವನ ಬಳಿಗೆ ಓಡಿದನು. ಅವರಾರೂ ದುರ್ವಾಸನನ್ನು ವಿಷ್ಣು ಚಕ್ರದಿಂದ ಕಾಪಾಡಲಾಗದೆ ಹೋದರು. ಕಡೆಗೆ ದುರ್ವಾಸನು ವೈಕುಂಠಕ್ಕೆ ಓಡಿ ಕಾಪಾಡುವಂತೆ ವಿಷ್ಣುವಿನ ಪಾದಗಳ ಮೇಲೆ ಬಿದ್ದನು.

ವಿಷ್ಣು ಕಿರುನಗುವಿನೊಂದಿಗೆ, "ಸುದರ್ಶನ ಚಕ್ರವನ್ನು ಉಪಯೋಗಿಸುವ ವರವನ್ನು ಅಂಬರೀಷನಿಗೆ ಕೊಟ್ಟಿದ್ದೇನೆ. ಅದನ್ನು ತಡೆಯಲು ನನಗೂ ಸಾಧ್ಯವಿಲ್ಲ. ಬೇಕಾದರೆ ನೀನೇ ಹೋಗಿ ಅಂಬರೀಷನನ್ನು ಶರಣು ಬೇಡಿಕೋ" ಎಂದು ಸಲಹೆ ಮಾಡಿದನು.

ಬೇರೆ ಉಪಾಯವಿಲ್ಲದೆ ದುರ್ವಾಸನು ಅಂಬರೀಷನ ಬಳಿಗೆ ಓಡಿಬಂದು ಕ್ಷಮಾಪಣೆ ಕೇಳಿದನು. ಅಂಬರೀಷನು ವಿಷ್ಣುವನ್ನು ಸ್ಮರಿಸಿ ಚಕ್ರವನ್ನು ಹಿಂದೆ ಕರೆದು ದುರ್ವಾಸನನ್ನು ಆದರಿಸಿದನು.






## ೧೨

[ಶಂಖನಿರುವ ಬೆಟ್ಟದ ಪ್ರಾಂತದಲ್ಲಿ ಚಂದ್ರವರ್ಮನು ಕಾಪಾಲಿನಿಯನ್ನು ಕೂಡಿಕೊಂಡ ಮೇಲೆ, ಶಂಖನನ್ನು ಹತಮಾಡಲು ವ್ಯೂಹ ರಚಿಸಿದರು. ಸೂರ್ಯೋದಯದ ವೇಳೆಯಲ್ಲಿ ಬೆಟ್ಟದ ತುದಿಗೆ ಬರುವ ಶಂಖನು, ಬೆಟ್ಟದ ಕೆಳಗಿನ ಅಗಾಧಕ್ಕೆ ಬೀಳುವಂತೆ ಚಂದ್ರವರ್ಮನು ಮಾಡಿಬಿಟ್ಟನು. ಆಗ ಶಂಖನು ತನ್ನ ಮಂತ್ರ ದಂಡವನ್ನು ಬೀಸಿ, ಮಂತ್ರಗೃಹವನ್ನು ಸರೋವರದೊಳಗೆ ಬೀಳಿಸಿದನು. —ಇನ್ನು ಓದಿರಿ]

ಮಹಾ ಮಾಂತ್ರಿಕನಾದ ಹಣ್ಣು ಮುದುಕ ಶಂಖನು, ಬೆಟ್ಟದ ತುದಿಯಿಂದ ಬೀಳುವಾಗ "ಮೋಸ! ದ್ರೋಹ!" ಎಂದು ಕಂಠ ಹರಿಯುವಂತೆ ಕೂಗುತ್ತ, ಕೈಯಲ್ಲಿದ್ದ ಮಂತ್ರದಂಡವನ್ನು ಮಂತ್ರ ಗೃಹದ ಕಡೆಗೆ ಬೀಸಿ ಒಗೆದುದನ್ನು ನೋಡಿದ ಕೂಡಲೇ ಕಾಪಾಲಿನಿ "ಅಯ್ಯೋ! ಹೋಯಿತು!" ಎಂದು ಕೂಗುತ್ತಾ ಕುಸಿದುಬಿದ್ದಳು.

ಅಷ್ಟರಲ್ಲಿ ಶಂಖನ ಮಂತ್ರಗೃಹವು ಫಡಫಡ ವೆಂಬ ದೊಡ್ಡ ಸಿಡಿಲಿನ ಶಬ್ದದಿಂದ ಬುನಾದಿ ಯೊಂದಿಗೇ ಮೇಲೆದ್ದು ಆಕಾಶದಲ್ಲಿ ತೇಲಿದುದನ್ನು ನೋಡಿ ಚಂದ್ರವರ್ಮನು ಬೆರಗಾಗಿ ಹೋದನು. ಅದು ತನ್ನ ತಲೆಯ ಮೇಲೆ ಬಿದ್ದು ಸರ್ವನಾಶವಾಗಿ ಹೋದಂತೆ ಭಯವೂ ಭ್ರಮೆಯೂ ಉಂಟಾಯಿತು. ಅವನು ತನ್ನ ಬೆರಗಿನಿಂದ ಎಚ್ಚರಕ್ಕೆ ಬರುವುದ ರೊಳಗೆ ಮಂತ್ರಗೃಹವು ದಭಾಲ್ಲೆಂಬ ಮತ್ತೊಂದು ಸಿಡಿಲ್ದನಿಯೊಂದಿಗೆ ಸರೋವರದೊಳಗೆ ಬಿದ್ದಿತು. ಆ ಅಪ್ಪಳಿಕೆಯಿಂದ ಸರೋವರದ ನೀರು ಆಕಾಶಕ್ಕೆ ಚಿಮ್ಮಿ ಮಳೆಯಂತೆ ಸುತ್ತಲೂ ಬಿದ್ದಿತು. ಇದಿರು ನೋಡದ ಈ ಘಟನೆಯಿಂದ ಭಯದಿಂದಲೂ ಗಾಬರಿಯಿಂದಲೂ ಸರ್ವಾಂಗ ಕಂಪಿಸುತ್ತಿದ್ದ ಚಂದ್ರ



ವರ್ಮನಿಗೆ ತನ್ನ ಬದಿಯಲ್ಲೇ ಕುಸಿದು ಬಿದ್ದ ಕಾಪಾಲಿನಿಯನ್ನು ನೋಡಲಾಗಲಿಲ್ಲ.

"ವರ್ಮಾ!" ಎಂಬ ಸಣ್ಣಗಿನ ನಿಃಶಕ್ತವಾದ ಧ್ವನಿಯನ್ನು ಕೇಳಿ, ಚಂದ್ರವರ್ಮನು ಮೂರ್ಛೆಯಿಂದ ಎದ್ದವನಂತೆ ಕಾಪಾಲಿನಿಯ ಕಡೆಗೆ ನೋಡಿದನು. ಕಾಪಾಲಿನಿ ತನ್ನ ಪಕ್ಕದಲ್ಲಿದ್ದೊಂದು ಬಂಡೆಗಲ್ಲನ್ನು ಆಧಾರಕ್ಕೆ ಹಿಡಿದು ಎದ್ದು ನಿಲ್ಲಲು ಪ್ರಯತ್ನಿಸುತ್ತಿದ್ದಳು. ತಾವಿಬ್ಬರೂ ಈ ಭೂಮಿಯಲ್ಲೇ ಇರುವೆವೆಂದು ಆಗ ಚಂದ್ರವರ್ಮನಿಗೆ ತೋರಿ, ಧೈರ್ಯ ಬಂತು. ಅವನು ಕಾಪಾಲಿನಿಯನ್ನು ಕೈ ಹಿಡಿದು ಎಬ್ಬಿಸಿ ನಿಲ್ಲಲು ಸಹಾಯಮಾಡಿದನು.

"ಚಂದ್ರವರ್ಮಾ, ನನ್ನನ್ನು ಹಿಡಿದು ಪೀಡಿಸುವ ದುರದೃಷ್ಟ ದೇವತೆಯೇ ನಿನ್ನನ್ನೂ ಹಿಡಿದಿರುವ ಹಾಗಿದೆ. ಶಂಖನು ಕಡೆಗೂ ನಮ್ಮ ಎಲ್ಲಾ ಪ್ರಯತ್ನಗಳನ್ನೂ ಮಣ್ಣುಗೂಡಿಸಿಬಿಟ್ಟನು. ಈಗ ನೀನೂ ನಾನೂ ಕೂಡಾ ಪೂರ್ವದ ನಿಸ್ಸಹಾಯ ಸ್ಥಿತಿಗೇ ಬಂದುಬಿಟ್ಟೆವು. ಇರುವ ಜಾಗವನ್ನು ಬಿಟ್ಟು ಅನೇಕ ಪ್ರಾಣ ಗಂಡಗಳನ್ನು ದಾಟಿ, ಈ ಶಂಖನ ಬೆಟ್ಟವನ್ನು ತಲಪಿದ್ದೇವೆ. ಈಗ ನಿನಗೂ ಸಹ ಕಡೆಗೆ ಉಳಿದದ್ದು ಬರೀ ನಿರಾಶೆಯೇ ಆಯಿತಪ್ಪ! ಹೀಗಾದೀತೆಂದು ನಾನೇನು ಕಂಡೆ? ನಿನ್ನನ್ನು ಸುಮ್ಮನೆ ದಣಿಸಿದೆ" ಎಂದಳು ಕಾಪಾಲಿನಿ ನಡುಗುವ ಸ್ವರದಲ್ಲಿ.

ಮಾಂತ್ರಿಕಳಾದ ಕಪಾಲಿನಿಯ ಬಾಯಿಯಿಂದ ಅಂತಹ ಮಾತುಗಳು ಹೊರಟುದನ್ನು ಕೇಳಿ, ತನ್ನ ಪ್ರಯತ್ನವೆಲ್ಲಾ ನಿಷ್ಫಲವಾಯಿತೆಂದು ಚಂದ್ರವರ್ಮನೂ ತಿಳಿದನು. ಥಕ್ಕನೆ ಮಂತ್ರಗೃಹವು ಎದ್ದು ಬಿದ್ದುದರಿಂದ ಸರೋವರದಲ್ಲಿ ಅಷ್ಟೆತ್ತರಕ್ಕೆ ಎದ್ದ ಅಲೆಗಳನ್ನು ನೋಡಿ ನಿಟ್ಟುಸಿರುಬಿಡುತ್ತ, "ಹಾಗಾದರೆ ಕಾಪಾಲಿನೀ, ಮಂತ್ರಗೃಹದೊಂದಿಗೆ ಅಪೂರ್ವ ಶಕ್ತಿಯುಳ್ಳ ಶಂಖವು ಸಹಾ ಸರೋವರದಲ್ಲಿ ಬಿದ್ದುಹೋಯಿತೆಂದು ಅನುಮಾನಿಸುವಿಯಾ? ಇನ್ನು ಅದು ಸಿಗುವ ದಾರಿಯೇ ಇಲ್ಲವೇ?" ಎಂದು ಕೇಳಿದನು ಚಂದ್ರವರ್ಮ.

"ಅನುಮಾನವೇನೂ ಅಲ್ಲಪ್ಪಾ. ಹಾಗೆಯೇ ನಡೆದಿದೆ. ಮಂತ್ರಗೃಹದಲ್ಲಿ ಆ ಅಪೂರ್ವ ಶಕ್ತಿಗಳ ಶಂಖ ಒಂದೇ ಅಲ್ಲ; ಇನ್ನೂ ಅನೇಕ ಮಹಾ ಶಕ್ತಿವಂತಗಳಾದ ವಸ್ತುಗಳೂ ಇವೆ. ನಾನು ಆಶೆಪಟ್ಟದ್ದು ಆ ಶಂಖದ ಮೇಲೆ ಮಾತ್ರವೇ. ಆದರೆ ನಿನಗೆ ನಿನ್ನ ರಾಜ್ಯವನ್ನು ಸುಲಭವಾಗಿ ಗೆಲಿಸಿಕೊಡುವಂತಹ ಎಷ್ಟೋ ವಸ್ತುಗಳು ಮಂತ್ರ ಗೃಹದೊಂದಿಗೆ ಸರೋವರದ ಪಾಲಾಗಿವೆ. ನಿನಗೇ ದೊಡ್ಡ ನಷ್ಟ" ಎಂದಳು ಕಾಪಾಲಿನಿ.

ಕೊನೆಯ ಕ್ಷಣಗಳಲ್ಲಿ ಕೈಜಾರಿ ಹೋದ ಅಪೂರ್ವ ವಸ್ತುಗಳನ್ನು ನೆನೆದು ಒಂದೆರಡು ಕ್ಷಣ ನಿಶ್ಚೇಷ್ಟಿತನಂತಾಗಿ, ಚಂದ್ರವರ್ಮನು ಅಷ್ಟರಲ್ಲೇ ಸಮಾಳಿಸಿ ಎದೆಗಟ್ಟಿ ಮಾಡಿಕೊಂಡು, "ಕಾಪಾಲಿನೀ ಕಳೆದು ಹೋದುದನ್ನು ನೆನೆದು ಈಗ ಚಿಂತಿಸಿಕೊಂಡಿರುವು

ದರಿಂದ ಲಾಭವೇನಿಲ್ಲ. ಕ್ರೂರಕರ್ಮದ ಮಾಂತ್ರಿಕನೊಬ್ಬನನ್ನು ಯಮಪುರಿಗೆ ಕಳುಹಿಸಿದ್ದೇವೆ. ಅದೇನೂ ಸಣ್ಣ ಕಾರ್ಯವಲ್ಲ. ಅಷ್ಟು ಸಾಕು " ಎಂದು ಚಂದ್ರವರ್ಮನು ಆಗತಾನೇ ಏನೋ ನೆನಪಾಗಲು, ದೊಡ್ಡ ಕಣ್ಣುಗಳಿಂದ ಕಾಪಾಲಿನಿಯನ್ನು ನೋಡುತ್ತಾ. "ಕಾಪಾಲಿನೀ, ನನ್ನಿಂದ ಸಾಧ್ಯವಾದಷ್ಟು ನಿನಗೆ ಸಹಾಯ ಮಾಡಬೇಕೆಂದೇ ಇದ್ದೇನೆ. ಆ ಶಂಖವೀಗ ನೀರಿನ ಪಾಲಾಗಿ ಹೋಯಿತಷ್ಟೆ? ಈಗ ನಿನ್ನ ವೃದ್ಧಾಪ್ಯವನ್ನು ಹೋಗಲಾಡಿಸಿ ನಿನಗೆ ಮತ್ತೆ ಯೌವನದ ಶಕ್ತಿಯನ್ನು ಒರಿಸುವ ವಸ್ತುವಿಗಾಗಿ ಎಲ್ಲಿ ಹುಡುಕಬೇಕು ? ಶಂಖದಂತಹ ಬೇರೆ ವಸ್ತುವೇ ಇಲ್ಲವೆ ? " ಎಂದು ಕೇಳಿದನು.



"ಎಲ್ಲಿ ಹುಡುಕಿದರೂ ಆ ಶಂಖದಂತಹ ಮತ್ತೊಂದು ವಸ್ತು ಸಿಕ್ಕುವ ಅವಕಾಶ ಇನ್ನಿಲ್ಲವಪ್ಪಾ ಚಂದ್ರವರ್ಮಾ ! " ಎಂದಳು ನಿರಾಶೆಯಿಂದ ಕಾಪಾಲಿನಿ. ಸ್ವಲ್ಪ ತಡೆದು, "ನಾನು ಈವರೆಗೆ ಸಾಧಾರಣ ಮನುಷ್ಯರು ಜೀವಿಸಿರುವುದಕ್ಕಿಂತ ಹೆಚ್ಚಿಗೆ ಕಾಲ ಜೀವಿಸಿದ್ದೇನೆ. ಹೀಗೆಯೇ ಇನ್ನೂ ಬದುಕಬೇಕೆಂಬ ಆಶೆ ಕೂಡಾ ನನ್ನಲ್ಲಿ ನಶಿಸಿಕೊಂಡು ಬರುತ್ತಿದೆ. ಇನ್ನೆಷ್ಟು ಕಾಲ ಬದುಕಿದರೆ ಮಾತ್ರ ನಾನು ಹೊಸತಾಗಿ ಅನುಭವಿಸುವ ಸುಖವಾದರೂ ಏನಿದೇ ಹೇಳು ? ಈಗ ನನಗಿರುವ ವಿಚಾರವಲ್ಲಾ ನಿನ್ನನ್ನು ಕುರಿತೇ ಅಪ್ಪಾ ! ನನಗಾಗಿ ನೀನು ಬಹಳ ಕಷ್ಟಪಟ್ಟಿರುವಿ. ಪ್ರಾಣಾಪಾಯಗಳಿಗೂ ಗುರಿಯಾಗಿರುವಿ. ಅಂತಹ ನಿನಗೆ ನಾನು ಯಾವ ಪ್ರತ್ಯುಪಕಾರವನ್ನೂ ಮಾಡಲಾಗದ ಸ್ಥಿತಿಗೆ ಬಂದೆನಲ್ಲಾ, ಎಂಬುದೇ ನನಗೀಗ ಬಂದ ಚಿಂತೆ " ಎಂದಳು.

ಆ ಮಾತುಗಳನ್ನು ಕೇಳಿ ಚಂದ್ರವರ್ಮನಿಗೆ ಅವಳ ಮೇಲೆ ತುಂಬಾ ಕರುಣೆಯೂ ಗೌರವವೂ ಉಂಟಾಯಿತು. ಆಕೆ ಶಂಖನಿಂದ ವಿಶೇಷ ಶಕ್ತಿಯುಳ್ಳ ಶಂಖವನ್ನು ಸಂಪಾದಿಸಿಕೊಳ್ಳಲು ಎಷ್ಟೋ ವರ್ಷಗಳಿಂದ ಪ್ರಯತ್ನಿಸಿಕೊಂಡಿದ್ದಳು. ಅದು ನಿಷ್ಫಲವಾದುದನ್ನು ನೋಡಿ ಕೂಡಾ ಅಷ್ಟೊಂದು ಚಿಂತೆ ಪಡಲಿಲ್ಲ. ಅವಳನ್ನು ಈಗ ಹಿಡಿದು ಪೀಡಿಸುವುದೆಲ್ಲಾ ತನಗೆ ಮತ್ತೆ ತನ್ನ ರಾಜ್ಯವು ಸಿಗುವ ಹಾಗೆ ಮಾಡಲಾಗದೆ ಹೋದೆನೆಂಬ ಚಿಂತೆಯೇ ಎಂದು ತಿಳಿದು ಚಂದ್ರವರ್ಮನ ಹೃದಯವು ಕರಗಿತು. ಅವಳು ತನ್ನ ಪೂರ್ವಜನ್ಮದ ನಿಕಟ ಸಂಬಂಧಿಕಳಾಗಿರಬೇಕೆಂದು ಭಾವಿಸಿದನು.

"ಕಾಪಾಲಿನೀ ! ನೀನು ನನಗೆ ಮಾಡಿದ ಸಹಾಯ ಕೂಡಾ ಅನೇಕವಿದೆ. ನಾನು ನದಿಯಲ್ಲಿ ಬಿದ್ದು ನೀನಿರುವ ಕಾಡಿನ ಪ್ರಾಂತವನ್ನು ಸೇರಿದಾಗ, ನನಗೆ ಸಾವು ಬಂತೆಂದೇ' ತಿಳಿದಿದ್ದೆ. ಆಗ ನೀನು ನಿನ್ನ ಗೃಹದಲ್ಲಿ ನನಗೆ ಆಶ್ರಯಕೊಟ್ಟು, ಬಹಳ ಸಹಾಯ ಮಾಡಿದಿ. ನಿನಗೆ ನಾನು ಚಿರಕಾಲ ಕೃತಜ್ಞನಾಗಿರಲಿಕ್ಕೆ ಆ ಸಹಾಯವೊಂದೇ ಸಾಕು. ಆದರ ಮೇಲೆ




ಆ ನಿನ್ನ ಯೋಗದಿಂದಾಗಿ ಪ್ರಾಣಿಗಳ ಭಾಷೆ ಅರ್ಥ ಮಾಡಿಕೊಳ್ಳುವ ವಿಶೇಷ ಶಕ್ತಿ ನನಗೆ ಬಂದಿದೆ. ಅದೆಲ್ಲಾ ಹಾಗಿರಲಿ. ಈಗ ನಾವು ಮೊದಲು ಮಾಡ ಬೇಕಾದ ಕಾರ್ಯವೇನು ? ಅದನ್ನು ಮಾಡಬೇಕು " ಎಂದನು ಚಂದ್ರವರ್ಮ.

ಕಾಪಾಲಿನಿ ಸ್ವಲ್ಪಹೊತ್ತು ಬೆಟ್ಟದ ಮೇಲಕ್ಕೆ ದೃಷ್ಟಿಯನ್ನು ಹರಿಸಿ, "ಚಂದ್ರವರ್ಮಾ, ಇನ್ನು ನಮ್ಮಿಬ್ಬರ ದಾರಿಯೂ ಬೇರೆ ಬೇರೆಯಾಗದೆ ಉಪಾಯವಿಲ್ಲ. ನಾನು ಉಳಿದಿರುವ ನನ್ನ ಕಾಲ ವನ್ನು ಈ ಬೆಟ್ಟದ ಮೇಲಿದ್ದೇ ಕಳೆಯಬೇಕೆಂದಿ ದ್ದೇನೆ. ಇನ್ನು ನನ್ನದು ಜೀವಿತದ ಆಖೈರು ದಶೆ. ಅದನ್ನು ಒಂದೇ ಕಡೆಯಲ್ಲಿದ್ದು ಸ್ಥಿಮಿತವಾಗಿ ಶಾಂತ ರೀತಿಯಲ್ಲಿ ಕಳೆಯಬೇಕೆಂದಿದ್ದೇನೆ" ಎಂದಳು ಕಾಪಾಲಿನಿ.

"ಹಾಗಾದರೆ ಈ ಬೆಟ್ಟದ ಮೇಲೊಂದು ಒಳ್ಳೆಯ ಸ್ಥಳವನ್ನು ನೋಡಿ, ಅಲ್ಲಿ ನಿನಗೆ ಮನೆಕಟ್ಟಿ ಕೊಳ್ಳಲು ನಾನೂ ಸಹಾಯ ಮಾಡುತ್ತೇನೆ. ಜತೆಗೆ ಕಾಲನಾಗನೂ ಇದ್ದಾನೆ. ನಿನ್ನನ್ನೊಂದು ಸ್ಥಿರವಾದ ಜಾಗದಲ್ಲಿರಿಸಿಬಿಟ್ಟರೆ ನನಗೂ ನೆಮ್ಮದಿ. ಹಾಗಾದರೆ ಬೆಟ್ಟದ ಮೇಲೆ ಹೋಗೋಣವೆ? ಹೊರಡು" ಎಂದನು ಚಂದ್ರವರ್ಮ.

ಕಾಪಾಲಿನಿ ಸರಿ ಎಂಬಂತೆ ತಲೆಯಾಡಿಸಿದಳು. ಚಂದ್ರವರ್ಮನು ಕಾಲುದಾರಿಯಲ್ಲಿರುವ ಕಲ್ಲಿನ ರಾಶಿಗಳ ನಡುವಿನಿಂದಾಗಿ ಬೆಟ್ಟದ ಮೇಲಕ್ಕೆ ನಡೆಯತೊಡಗಿದನು. ಅವನ ಹಿಂದೆ ಕಾಪಾಲಿನಿಯೂ ಕಾಲನಾಗನೂ ನಡೆಯತೊಡಗಿದರು. ಚಂದ್ರ ವರ್ಮನು ತಾನು ಮಂತ್ರವಾದಿ ಶಂಖನನ್ನು ಕಣಿವೆಯ ಅಗಾಧದೊಳಗೆ ಬೀಳುವಂತೆ ಮಾಡಿದ ಪೂರ್ವ ದಿಕ್ಕಿನ ಬೆಟ್ಟದ ಅಂಚಿಗೆ ಹೋದ ಕೂಡಲೇ ಅಲ್ಲಿ ನಿಂತು ಕೆಳಕ್ಕೆ ಬಾಗಿ ನೋಡಿದನು. ಅಗಾಧದ ಅಡಿಯಲ್ಲಿ ಒಂದು ಬಂಡೆಗಲ್ಲಿನ ಮೇಲೆ ಕೌಚಿ ಬಿದ್ದಿರುವ ಶಂಖ ಮಾಂತ್ರಿಕನ ಶರೀರವು ಮಸಕಾಗಿ ಕಾಣಿಸಿತು. ಅವನು ಅದನ್ನು ಪರೀಕ್ಷಿಸಿಕೊಂಡಿದ್ದಾಗ ಶಂಖನ ಕೈ ಕದಲುವುದೇನೋ ಅನಿಸಿತು. ಅದೇ ಸಮಯದಲ್ಲಿ ಆ ಕ್ರೂರ ಮಾಂತ್ರಿಕನ ಮೇಲೆ ವಿಪರೀತ ಸಿಟ್ಟೂ ಎದ್ದಿತು. ಆ ಕ್ರೂರ ಮಾಂತ್ರಿಕನು ಎಷ್ಟು ನಿಧಾನವಾಗಿ ಸಾಯುತ್ತಿದ್ದಾನೆ! ಅವನ ಅಂತ್ಯವು ಎಷ್ಟೊಂದು ಘೋರವಾಯಿತು !

ಚಂದ್ರವರ್ಮನು ತನ್ನ ಹತ್ತಿರ ಬರುವ ಕಾಪಾಲಿನಿಯ ಕಡೆಗೆ ತಿರುಗಿ, ಆ ಪಾಪಿಯ ಶರೀರ ದಲ್ಲಿ ಇನ್ನೂ ಜೀವವಾಡುವ ಹಾಗೆ ಕಾಣುತ್ತದೆ. ಅವನ ಮಂತ್ರ ಪ್ರಭಾವದ ಪ್ರಕಾಶವು ಇನ್ನೂ ಆರದೆ ಮಸಕಾಗಿರುವ ಹಾಗೆ ಶರೀರಾಕೃತಿಯನ್ನು ತೋರಿಸಿಕೊಂಡಿದೆ. ಒಂದುವೇಳೆ ಅವನು ಮತ್ತೆ ಬದುಕಿ ಎದ್ದನಾದರೆ ನಮಗೆ ಮುಪ್ಪು ತಪ್ಪದು. ನಾನೀಗ ಈ ಕಲ್ಲಿನಿಂದ ಅವನ ತಲೆಯನ್ನು ಜಜ್ಜಿ ಹಾಕಬೇಕೆಂದಿದ್ದೇನೆ, ಇದರಿಂದ ವಿಶೇಷ ಪಾಪವೇನೂ

ಬಾರದು. ಸಂಶಯವೂ ತೀರುತ್ತದೆ" ಎಂದು ಹೇಳಿ ಬದಿಯಲ್ಲಿದ್ದೊಂದು ದೊಡ್ಡ ಕಲ್ಲನ್ನೆತ್ತಿ ಗುರಿಯಿಟ್ಟು ಅಗಾಧದೊಳಗೆ ಹಾಕಿದನು. ಕಾಪಾಲಿನಿ ಅವನ ಕೃತಿಯನ್ನು ಒಪ್ಪಿಕೊಳ್ಳುವಂತೆ ತಲೆಯಾಡಿಸಿದಳು.

ಅನಂತರ ಕಾಪಾಲಿನಿಯೂ ಚಂದ್ರವರ್ಮನೂ ಸ್ವಲ್ಪದೂರ ನಡೆದು, ಹಿಂದೆ ಶಂಖನ ಮಂತ್ರ ಗೃಹವಿದ್ದ ಪ್ರದೇಶಕ್ಕೆ ಹೋದರು. ಆ ಪ್ರದೇಶದಲ್ಲಿ ಈಗ ಆ ಮಂತ್ರಗೃಹದ ಬುನಾದಿಯು ನಿಲ್ಲುವೆತ್ತರ ಹೊಂಡವೇ ಇದ್ದಿತು. ಚಂದ್ರವರ್ಮನು ಅದನ್ನು ಕಾಪಾಲಿನಿಗೆ ತೋರಿಸುತ್ತ, "ಇದು ಚೆನ್ನಾಗಿದೆ. ಬುನಾದಿ ಅಗೆಯುವ ಕೆಲಸವಿಲ್ಲ. ನಿನಗೆ ಬೇಕಾದ ಮನೆಯನ್ನು ಈ ಬುನಾದಿಯ ಆಧಾರದಲ್ಲೇ ನಿರ್ಮಿಸಬಹುದು. ನಿನಗೆ ಒಪ್ಪಿಗೆಯೋ? ಆ ದುಷ್ಟನ ಜಾಗ ಒಳ್ಳೆಯದಲ್ಲವೆಂಬ ಸಂದೇಹವೇನಿಲ್ಲವಷ್ಟೆ?" ಎಂದು ಕೇಳಿದನು.



ಕಾಪಾಲಿನಿ ಅದಕ್ಕೆ ತನ್ನ ಒಪ್ಪಿಗೆ ಸೂಚಿಸಿದಳು. ಅಷ್ಟು ಹೊತ್ತಿಗೆ ಬೆಳಗ್ಗಿನ ಸೂರ್ಯನು ಆಕಾಶ ದಲ್ಲಿ ಮೂರು ಮಾರು ಎತ್ತರಕ್ಕೆ ಏರಿದ್ದನು. ಚಂದ್ರ ವರ್ಮನು ಮೂಡುದಿಕ್ಕಿನ ಆಕಾಶವನ್ನು ನೋಡಿ, "ಹೊಟ್ಟೆಯಲ್ಲಿ ಹಸಿವೆಯ ಕಾಟ ಜೋರಾಗಿದೆ. ಒಂದಿಷ್ಟು ಆಹಾರತಿಂದರೆ ಎಷ್ಟು ಒಳ್ಳೆಯದಿತ್ತು! ಈಗ ಹಣ್ಣುಗಳನ್ನು ಹುಡುಕಲಿಕ್ಕೆ ಬೆಟ್ಟವನ್ನಿಳಿದು ಹೋಗಬೇಕಾಗಿದೆ. ಹೋಗಲೇಬೇಕು" ಎಂದು ನಿಟ್ಟುಸಿರುಬಿಟ್ಟನು.

ಚಂದ್ರವರ್ಮನು ತುಂಬಾ ಬಳಲಿ ಹೋದ ನೆಂದು ತಿಳಿದ ಕಾಪಾಲಿನಿ, ಕಾಲನಾಗನ ಕಡೆಗೆ ತಿರುಗಿ, "ಕಾಲನಾಗಾ, ನಿನಗೆ ತಿರುಗಿ ಮೊದಲಿನ ಮಾನವರೂಪ ಬರುವ ಹಾಗೆ ಮಾಡುತ್ತೇನಪ್ಪ. ಈ ದಿನದಿಂದ ನೀನು ಸ್ವೇಚ್ಛೆಯಾಗಿರು. ನಿನಗೆ ಇಷ್ಟ ಬಂದ ಕಡೆಗೆ ಹೋಗಬಹುದು" ಎಂದು ಏನೋ ಮಂತ್ರವನ್ನು ಜಪಿಸುತ್ತ, ತನ್ನ ಕೈಯಲ್ಲಿದ್ದ ಮಾನವಾಸ್ತಿಕೆಯಿಂದ ಕಾಲನಾಗನ ತಲೆಯನ್ನು ತಡವಿದಳು. ಕೂಡಲೇ ಆರಡಿ ಎತ್ತರದ ಮರದ ಬೊಡ್ಡೆಯಂತಹ ದೃಢ ಶರೀರದ, ಬಲವಾದ ಕೈಕಾಲುಗಳ ಯುವಕನೊಬ್ಬನು ಅಲ್ಲಿ ಪ್ರತ್ಯಕ್ಷ ನಾದನು. ಕಾಲನಾಗನ ನಿಜವಾದ ಮಾನವ ರೂಪ ನೋಡಿ ಚಂದ್ರವರ್ಮನಿಗೆ ಬೆರಗಿನಿಂದ ಕೂಡಿದ ಸಂತೋಷವಾಯಿತು.

"ಕಾಪಾಲಿನೀ! ನಿನ್ನ ದಯೆಗೆ ಕೃತಜ್ಞನಾಗಿರು ತ್ತೇನೆ" ಎಂದು ಆ ಯುವಕನು ಕಾಪಾಲಿನಿಗೆ ಕೈ ಮುಗಿದು, ಚಂದ್ರವರ್ಮನ ಕಡೆಗೆ ತಿರುಗಿ, "ಅಯ್ಯಾ, ನಿಮ್ಮ ಉಪಕಾರ ಎಂದಿಗೂ ಮರೆಯಲಾರೆ. ನಿಮ್ಮ ವಿಶ್ವಾಸದ ಬಂಟನೆಂದು ನನ್ನನ್ನು ತಿಳಿಯಿರಿ" ಎಂದು ನಮಸ್ಕಾರ ಮಾಡಿದನು.

"ಹಿಂದೆ ನೀನು ಮಾನವರೂಪದಲ್ಲಿರುವಾಗ ಯಾವ ಹೆಸರಿನಿಂದಿದ್ದೆಯೋ ನನಗೆ ತಿಳಿಯದು. ನನಗೆ ಸರ್ಪಕೇತು ಎಂಬ ಶತ್ರು ಒಬ್ಬನಿದ್ದಾನೆ.




ನೀನು ನನ್ನ ಮಿತ್ರನಾದುದರಿಂದ ನಿನ್ನನ್ನು ಕಾಲಕೇತುವೆಂದು ಕರೆಯ ಬೇಕೆಂದಿದ್ದೇನೆ. ಏನನ್ನುವಿ ? ಇದು ನಿನಗೆ ಹಿಡಿಸದಿದ್ದಲ್ಲಿ ಶಂಕಿಸಬೇಡ. ಹೇಳು " ಎಂದನು ಚಂದ್ರವರ್ಮ.

" ಹಾಗೆಯೇ ಆಗಲಿ. ನನ್ನನ್ನು ಕಾಲಕೇತು ಎಂದೇ ಕರೆಯಿರಿ. ಯಾವ ದಿನವಾದರೂ ನಾನು ನಿಮ್ಮ ಶತ್ರುವಾದ ಸರ್ಪಕೇತುವನ್ನು ಬಲಿ ತೆಗೆದುಕೊಂಡು, ಕಾಲಕೇತುವೆಂದು ನೀವಿಟ್ಟ ಹೆಸರನ್ನು ನಿಮ್ಮ ಸಂತೋಷ ಸ್ಥಿರವಾಗಿರುವ ಹಾಗೆ ಸಾರ್ಥಕಪಡಿಸಿಕೊಳ್ಳುತ್ತೇನೆ " ಎಂದನು ಯುವಕ.

ತರುವಾಯ ಕಾಲಕೇತು ಬೇಗ ಬೇಗನೆ ಬೆಟ್ಟ ಇಳಿದು ಹೋಗಿ, ಸರೋವರದ ಹತ್ತಿರದಲ್ಲಿರುವ ತೋಟದ ಫಲವೃಕ್ಷಗಳಿಂದ ಬೇರೆ ಬೇರೆ ಬಗೆಯ ಒಳ್ಳೊಳ್ಳೆಯ ಹಣ್ಣುಗಳನ್ನು ಕೊಯ್ದುಕೊಂಡು, ಚಂದ್ರವರ್ಮ, ಕಾಪಾಲಿನಿಯರ ಬಳಿಗೆ ಬಂದನು. ಮೂವರೂ ಆ ಹಣ್ಣುಗಳನ್ನು ತಿಂದು, ಸಮೀಪದಲ್ಲಿ ಹರಿಯುವ ಒಸರು ತೊರೆಯ ಶುದ್ಧವಾದ ನೀರನ್ನು ಕುಡಿದರು.

ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡ ಮೇಲೆ, ಚಂದ್ರವರ್ಮನೂ, ಕಾಲಕೇತುವೂ ಕೂಡಿ, ಶಂಖಿನ ಮಂತ್ರಗೃಹವಿದ್ದ ಬುನಾದಿಯ ಮೇಲೆ ಕಲ್ಲುಗಳಿಂದ ಕಾಪಾಲಿನಿಗಾಗಿ ಮನೆ ಕಟ್ಟತೊಡಗಿದರು. ಶ್ರಮವಿಲ್ಲದೆ ಕೆಲಸ ಮಾಡುವ ಕಾಲಕೇತುವಿನಂತಹ ಬಲಶಾಲಿಯ ಸಹಾಯದಿಂದ್ಧ ಹೊತ್ತು ಮುಳುಗಿ ಕತ್ತಲಾಗುವಷ್ಟರಲ್ಲಿ ಮನೆಕಟ್ಟುವ ಕೆಲಸ ಮುಗಿಯಿತು.

ಆ ದಿನ ರಾತ್ರಿ ಮೂವರೂ ಆ ಮನೆಯೊಳಗೇ ಮಲಗಿದರು. ಚಂದ್ರವರ್ಮನಿಗೆ ನಡುರಾತ್ರಿಯ ವರೆಗೂ ನಿದ್ದೆ ಹತ್ತಲಿಲ್ಲ. ಅವನು ತನ್ನೊಳಗೇ ತನ್ನ ಕಾರ್ಯಕ್ರಮಗಳನ್ನು ಕುರಿತು ಆಲೋಚನೆ ಮಾಡಿಕೊಂಡಿದ್ದನು. ತಾನು ಕಾಪಾಲಿನಿಯ ಸಹಾಯದಿಂದ ಅಪೂರ್ವ ಶಕ್ತಿಗಳನ್ನು ಸಂಪಾದಿಸಿಕೊಂಡು ಮತ್ತೆ ತನ್ನ ರಾಜ್ಯವನ್ನು ಜಯಿಸಿಕೊಳ್ಳಬೇಕೆಂದು ಮಾಡಿದ್ದುದು ತಲೆ ಕೆಳಗಾಗಿ ಹೋಯಿತು. ತನ್ನ ತಂದೆಯನ್ನು ಮೋಸಪಡಿಸಿ ಅತಿ ಕ್ರೂರತನದಿಂದ ಕೊಲೆ ಮಾಡಿಸಿದ ಸರ್ಪಕೇತು ಈಗ ಇಡೀ ಮಾಹಿಷ್ಮತೀ ನಗರಕ್ಕೆ ರಾಜನಾಗಿದ್ದಾನೆ ! ಅಂತಹವನನ್ನು ಜಯಿಸಬೇಕಾದರೆ ತನಗೆ ದೊಡ್ಡ ಸೈನ್ಯವು ಬೇಕಾಗುತ್ತದೆ. ಸೈನ್ಯವನ್ನು ಸೇರಿಸಲು ಧನವು ಮುಖ್ಯವಾಗಿ ಬೇಕು. ಅಷ್ಟು ಧನವು ತನಗೆ ಹೇಗೆ ಸಿಗಲು ಸಾಧ್ಯ ? ಸಹಾಯಮಾಡುವ ಬಲಶಾಲೀ ಮಿತ್ರರು ತನಗೆ ಯಾರಿದ್ದಾರೆ ?

ಇಂತಹ ಆಲೋಚನೆಯಿಂದ ನಿದ್ದೆ ಹಿಡಿಸದೆ, ಚಂದ್ರವರ್ಮನು ಎದ್ದು ಹೊರಗೆ ಬಂದು, ಬೆಳದಿಂಗಳಲ್ಲಿ ಅತ್ತ ಇತ್ತ ಎಡತಾಕ ತೊಡಗಿದನು. ಸ್ವಲ್ಪ ಹೊತ್ತಿಗೆ ಕಾಲಕೇತು ಅವನ ಬಳಿಗೆ ಬಂದು, " ಅಯ್ಯಾ ! ಇಂತಹ ಅರ್ಧರಾತ್ರಿಯ ಹೊತ್ತಿನಲ್ಲಿ ಸ್ವಸ್ಥ ಮಲಗುವುದನ್ನು ಬಿಟ್ಟು ಹೀಗೆ ಅಲೆದಾಡುವಿರೇತಕ್ಕೆ ? ಯಾವ ಸಮಸ್ಯೆಗಾಗಿ ನೀವಿಷ್ಟು



ಆಲೋಚನೆ ಮಾಡುವಿರಿ ? ನಾನು ತಿಳಿಯುವಂತಹುದಾದರೆ ನಿಮ್ಮ ಚಿಂತೆಯಲ್ಲಿ ಭಾಗವಹಿಸಬೇಕೆಂದಿದ್ದೇನೆ" ಎಂದು ವಿನಯದಿಂದ ಕೇಳಿದನು.

"ಅದನ್ನೇನು ಕೇಳುತ್ತಿ, ಕಾಲಕೇತೂ ? ನನಗೆ ಎಲ್ಲವೂ ಸಮಸ್ಯೆಗಳೇ" ಎಂದು ಚಂದ್ರವರ್ಮನು. "ನಾನು ರಾಜ್ಯವನ್ನು ಕಳೆದುಕೊಂಡು ಕಾಡು ಪಾಲಾದ ರಾಜಕುಮಾರನೆಂದು ನಿನಗೆ ಗೊತ್ತಿದೆ ತಾನೆ ? ಅದಕ್ಕಾಗಿ ಕಾಪಾಲಿನಿಯ ಸಹಾಯವನ್ನು ಬಹಳವಾಗಿ ನಂಬಿದ್ದೆ. ಆಷ್ಟರು ಕ್ಷಣದಲ್ಲಿ ಶಂಖನು ತನ್ನ ಮಂತ್ರಗೃಹದೊಂದಿಗೇ ನಾಶವಾಗಿ ಹೋದನು. ಮಂತ್ರಗೃಹವು ಸರೋವರದೊಳಗೆ ಮುಳುಗಿತು. ಇದೊಂದು ದೊಡ್ಡ ಆಶಾಭಂಗ. ನಾನು ಇನ್ನು ಎಲ್ಲಿಗೆ ಹೋಗಿ, ಯಾರ ಸಹಾಯ ಪಡೆಯಬೇಕೆಂಬುದು ತಿಳಿಯದೆ ದೊಡ್ಡ ಬೇಸರದಲ್ಲಿದ್ದೇನೆ. ಇಲ್ಲಿ ಸುತ್ತುಮುತ್ತಣ ಎಷ್ಟು ದೂರದಲ್ಲಿ ಮಾನವರ ನಿವಾಸ ಸ್ಥಾನವಿರುವುದೋ ಕಾಣೆ. ಅದು ನಿನಗೇನಾದರೂ ಗೊತ್ತಿದೆಯೆ ? ಅದೂ ನನಗೆ ಸಹಾಯ ಮಾಡುವವರಾಗಿರಬೇಕಲ್ಲ ?" ಎಂದನು.

"ಅಯ್ಯಾ, ಈ ಬೆಟ್ಟಕಾಡುಗಳಿಗೆ ಉತ್ತರ ದಿಕ್ಕಿನಲ್ಲಿ, ಇಲ್ಲಿಂದ ನೂರು ಯೋಜನಗಳಷ್ಟು ದೂರದಲ್ಲಿ ಜನರಿರುವ ಪ್ರಾಂತವಿದೆ. ನಾನು ಕೂಡಾ ನಿಮ್ಮೊಂದಿಗೆ ಬರಬೇಕೆಂದಿದ್ದೇನೆ. ಆದರೆ ಕಾಪಾಲಿನಿಯನ್ನು ಈ ಬೆಟ್ಟದ ಮೇಲೆ ಸಹಾಯಕರಾರಿಲ್ಲದೆ ಒಬ್ಬಂಟಿಗಳಾಗಿರಲು ಬಿಡಲು ಮನಸ್ಸು ಒಪ್ಪುವುದಿಲ್ಲ. ಆಕೆ ಇನ್ನು ಬಹಳ ಕಾಲ ಬದುಕಿರಲಾರಳು. ಆಮೇಲೆ ಆಕೆ ತನ್ನ ಹಳೆಯ ಮನೆಯಲ್ಲಿ ಬಿಟ್ಟು ಬಂದ, ಭೂತ ವರ್ತಮಾನ ಕಾಲಗಳನ್ನು ಪ್ರತಿಫಲಿಸುವ ಗಾಜಿನಗೋಳದ ಸಹಾಯದಿಂದ ನಾನು ನಿಮ್ಮ ಬಳಿಗೆ ಖಂಡಿತಾ ಬರುತ್ತೇನೆ. ಆ ಗಾಜಿನ ಗೋಳವು ನಿಮಗೂ ಬಹಳ ಪ್ರಯೋಜನಕ್ಕೆ ಬರುತ್ತದೆ" ಎಂದನು ಕಾಲಕೇತು.

ಕಾಲಕೇತುವಿನ ಮಾತುಗಳು ಚಂದ್ರವರ್ಮನಿಗೆ ಸ್ವಲ್ಪವೂ ಉತ್ಸಾಹವನ್ನುಂಟು ಮಾಡಲಿಲ್ಲ. ಸುತ್ತುಮುತ್ತಲೂ ಕಾಣುವ ಗುಡ್ಡ ಬೆಟ್ಟಗಳನ್ನೂ ಕಾಡುಗಳನ್ನೂ ದಾಟಿ ನೂರು ಯೋಜನ ಪ್ರಯಾಣ ಮಾಡಲು ಸಾಧ್ಯವಾದರೆ ಮನುಷ್ಯರ ಮುಖಗಳನ್ನು ಕಾಣಲು ಸಾಧ್ಯ ! ಅಲ್ಲಿಯ ವರೆಗೆ ಮುಟ್ಟುವುದರೊಳಗೆ ಎಷ್ಟೆಲ್ಲ ಪ್ರಾಣಾಪಾಯಗಳನ್ನು ಇದಿರಿಸಬೇಕೋ ದೇವರಿಗೇ ಗೊತ್ತು ! ಹೇಗಾದರೂ ಆ ಕಡೆಗೆ ಹೋಗಲೇ ಬೇಕಾಯಿತು.

ಹೀಗೆ ಚಂದ್ರವರ್ಮನು ಸೂರ್ಯೋದಯವಾಗುವವರೆಗೂ ಈ ಬಗೆಯ ಆಲೋಚನೆಯಿಂದಲೇ ಕಾಲ ಕಳೆದನು. ಸೂರ್ಯೋದಯವಾದ ಮೇಲೆ ಅವನು ಸರೋವರದಲ್ಲಿ ಸ್ನಾನ ಮಾಡಿ, ಕಾಪಾಲಿನಿಯ ಹತ್ತಿರ ಬಂದು ತನ್ನ ಪ್ರಯಾಣದ ಸಂಗತಿಯನ್ನು ಹೇಳಿದನು. ಆಗ ಕಾಪಾಲಿನಿ ಅವನಿಗೆ ಆಶೀರ್ವಾದ ಮಾಡುತ್ತ, "ಚಂದ್ರವರ್ಮಾ, ನೀನು

ಎಷ್ಟೋ ಕಷ್ಟಗಳನ್ನಾದರೂ ಅಧಿಗಮಿಸಿ ಕಡೆಗೆ, ನಿನ್ನ ಶತ್ರುಗಳ ಸಂಹಾರ ಮಾಡಿ. ನಿನ್ನ ರಾಜ್ಯವನ್ನು ಗೆದ್ದುಕೊಳ್ಳುವಿ ಎಂಬುದು ನನ್ನ ದೃಢವಿಶ್ವಾಸ. ನಿನ್ನ ಮೇಲೆ ನಿನ್ನ ಕುಲದೇವತೆಯು ಅನುಗ್ರಹ ಯಾವಾಗಲೂ ಇರುತ್ತದೆ. ಹೋಗಿ ಬಾ " ಎಂದಳು.

ಚಂದ್ರವರ್ಮನು ಕಾಲಕೇತುವಿನೊಂದಿಗೂ ಹೋಗಿ ಬರುವನೆಂದು ಹೇಳಿ ಬೆಟ್ಟವನ್ನಿಳಿದು, ಮಹಾರಣ್ಯವನ್ನು ಸೇರಿದನು. ಅಲ್ಲಿಂದ ಉತ್ತರ ದಿಕ್ಕಿನ ಕಡೆಗೆ ಪ್ರಯಾಣ ಹೊರಟನು.

ಬೆಳಗ್ಗಿನಿಂದ ಒಂದೇ ಸಮನೆ ನಡೆಯುತ್ತಾ, ಮಧ್ಯಾಹ್ನದ ಹೊತ್ತಿಗೆ ದಣಿವಾರಿಸಿಕೊಳ್ಳಲಿಕ್ಕಾಗಿ ಒಂದು ಮಹಾವೃಕ್ಷವನ್ನು ನೋಡಿ, ಅದರ ಹತ್ತಿರ ಹೋದನು. ಅದರ ಬುಡದ ನೆಲದಲ್ಲಿ ಸ್ವಲ್ಪ ಹೊತ್ತು ಮಲಗಲು ಒಳ್ಳೆಯ ಜಾಗವನ್ನು ಆರಿಸುವ ಚಂದ್ರವರ್ಮನಿಗೆ ಆ ಮರದ ಬುಡದಲ್ಲಿ ಸುಮಾರು ನಾಲ್ಕು ಅಡಿಗಳಷ್ಟು ಉದ್ದವಿರುವ ಕಬ್ಬಿಣದ ಸಂಕಲೆಯೊಂದು ಕಂಡಿತು. ಇಂತಹ ಮಹಾರಣ್ಯದಲ್ಲಿ ಅಂತಹದೊಂದು ವಸ್ತುವಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವನು ಆ ಸಂಕಲೆಯನ್ನು ಕೈಯಲ್ಲಿ ಎತ್ತಿಕೊಂಡು ಪರೀಕ್ಷಿಸಿ ನೋಡಿದನು. ಅದು ಉಪಯೋಗಪಟ್ಟು ಬಹಳ ಕಾಲವಾದಂತೆ ಚೆನ್ನಾಗಿ ತುಕ್ಕು ಹಿಡಿದಿತ್ತು. ಆ ಕಬ್ಬಿಣದ ಸಂಕಲೆ ಈ ಅರಣ್ಯದ ನಡುವಿಗೆ ಹೇಗೆ ಬಂದಿತು ? ಅವನು ಯೋಚಿಸಿಕೊಂಡಿರುವಾಗ ದೂರದಲ್ಲಿ ಮಹಾ ಭಯಂಕರವಾದೊಂದು ಗರ್ಜನೆಯಂತಹ ಬೊಗಳಿಕೆ ಕೇಳಿಸಿತು.

ಅದನ್ನು ಕೇಳಿ ಚಂದ್ರವರ್ಮನ ಮೈಪೂರಾ ಜುಮುಗುಟ್ಟುತ್ತಿರಲು, ಸರಕ್ಕನೆ ಒರೆಯಿಂದ ಕತ್ತಿಯನ್ನು ಹಿರಿದು ನಿಂತನು. ದೂರದಲ್ಲಿ ಗುಡ್ಡದ ಕಲ್ಲುಗಳಲ್ಲಿ ಕುಪ್ಪಳಿಸಿಕೊಂಡು ದಾಟುತ್ತ, ಕೋರೆ ಹಲ್ಲುಗಳನ್ನು ತೋರಿಸಿಕೊಂಡು ತನ್ನ ಕಡೆಗೇ ಬರುವ ಒಂದು ನಾಯಿಯನ್ನು ನೋಡಿದನು. " ಇದು ಸಾಧಾರಣವಾದ ನಾಯಿಯಲ್ಲ. ಆ ರೂಪದಲ್ಲಿರುವ ಭಯಂಕರ ರಾಕ್ಷಸನೇ ಆಗಿರಬೇಕು " ಎಂದುಕೊಂಡು ಚಂದ್ರವರ್ಮನು ಬಲಗೈಯಲ್ಲಿ ಕತ್ತಿಯನ್ನು ಬಿಗಿಯಾಗಿ ಹಿಡಿದು, ಎಡಗೈಯಿಂದ ತನಗೆ ಸಿಕ್ಕಿದ ಕಬ್ಬಿಣದ ಸಂಕಲೆಯನ್ನು ಮೇಲಕ್ಕೆ ಎತ್ತಿದನು. ಆ ಕ್ಷಣದಲ್ಲಿ ಕಬ್ಬಿಣದ ಸಂಕಲೆ ತನ್ನ ಆತ್ಮರಕ್ಷಣೆಗೆ ಸಿಕ್ಕಿದಂತೆ ಅವನಿಗೆ ತೋರಿತು. ಅಷ್ಟರಲ್ಲಿ ಆ ರಕ್ಕಸನಾಯಿ ಇದಿರಿನಲ್ಲಿದ್ದ ಪೊದರಿನೊಳಗಿನಿಂದ ಮತ್ತೊಂದು ಸಾರಿ ಬೊಗಳಿಕೆ ಹೊರಡಿಸಿತು. ಅದರ ಬೆನ್ನಿಗೇ ಅದು ಪೊದರಿನ ಮೇಲಿಂದಾಗಿ ಹಾರಿ ಚಂದ್ರವರ್ಮನ ಮೇಲೆ ಎಗರಲು ಓಡಿ ಬಂದಿತು.

—( ಇನ್ನೂ ಇದೆ )





# ಯಮನಮಹಿಷ

ರಾಜಾ ತ್ರಿವಿಕ್ರಮನ ಮೌನಮುದ್ರೆಯನ್ನು ಭಂಗಿಸದೆ ಬಿಡನೆಂಬ ಹಟತೊಟ್ಟೇ ಶವವನ್ನು ಆವಹಿಸಿಕೊಂಡಿದ್ದ ಬೇತಾಳದ ಶವವನ್ನು, ಮತ್ತೆ ಬಂದ ತ್ರಿವಿಕ್ರಮನು ಮರದಿಂದ ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಕಥೆಯನ್ನು ಸಿದ್ಧಪಡಿಸಿಕೊಂಡ ಬೇತಾಳವು ಮಾತಾಡಲು ತೊಡಗಿತು : " ಎಲೈ ಮಹಾರಾಜನೇ ! ಎಷ್ಟುಸಾರಿ ವಿಫಲನಾದರೂ ಕೂಡ ನೀನು ಮತ್ತೆ ಮತ್ತೆ ಈ ರಾತ್ರಿಯ ಹೊತ್ತಿನಲ್ಲಿ ಸ್ಮಶಾನದಲ್ಲಿ ತಿರುಗುವುದನ್ನು ನೋಡಿದರೆ ಇದಕ್ಕೆ ಏನೋ ನಿನ್ನ ಸ್ವಾರ್ಥವೇ ಕಾರಣವಾಗಿರಬೇಕೆಂದು ಕಾಣುತ್ತದೆ. ಅದು ನಿಜವೆಂದಾದರೆ ನಿನಗೊಂದು ಸಂಗತಿಯ ನೆನಪು ಮಾಡಬೇಕೆಂದಿದ್ದೇನೆ. ಧನಕನಕ ವಸ್ತುವಾಹನಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನೂ ಆಶಿಸಿ, ಎಷ್ಟೋ ಕಠೋರ ಶ್ರಮಗಳಿಗೊಳಗಾಗಿ, ತೀರಾ ಅವುಗಳನ್ನು ಪಡೆಯಲಿರುವ ಸಮಯಕ್ಕೆ, ಏನೋ ಚಪಲಬುದ್ಧಿಯಿಂದಾಗಿ ಅವುಗಳನ್ನು ತಿರಸ್ಕರಿಸುವವರು ಕೂಡಾ ಅನೇಕರಿರುತ್ತಾರೆ. ಅವರ ಹಾಗೆ ನೀನಾಗಬಾರದು.

## ಬೇತಾಳಕಥೆಗಳು?...



ಅಂತಹವರಲ್ಲೊಬ್ಬನಾದ ಕುಮಾರಸ್ವಾಮಿ ಎಂಬೊಬ್ಬ ವೈದ್ಯನ ಕಥೆಯನ್ನು ನಿನಗೆ ಹೇಳುತ್ತೇನೆ. ಕೇಳುತ್ತಾ ಸಾಗುವಾಗ ನಡೆಯುವ ಶ್ರಮ ತಿಳಿಯಲಾರದು" ಎಂದು ಕಥೆಯನ್ನು ಪ್ರಾರಂಭಮಾಡಿತು.

ಹಿಂದೆ ವಿಂಧ್ಯಾರಣ್ಯ ಪ್ರಾಂತಗಳಲ್ಲಿದ್ದ ಒಂದಾನೊಂದು ಸಣ್ಣ ಹಳ್ಳಿಯಂತಹ ಗ್ರಾಮದಲ್ಲಿ ಭೈರವಸ್ವಾಮಿ ಎಂಬ ವೈದ್ಯನು ವಾಸವಾಗಿದ್ದನು. ಅವನಿಗೆ ಒಬ್ಬ ಮಗನ ಹೊರತು ಬೇರೆ ಸಂತಾನವಿರಲಿಲ್ಲ. ಆ ಮಗನ ಹೆಸರು ಕುಮಾರಸ್ವಾಮಿ ಭೈರವಸ್ವಾಮಿಗೆ ಒಳ್ಳೆಯ ಘನ ವೈದ್ಯನೆಂಬ ಹೆಸರಿದ್ದಿತು. ಆದರೆ ಅವನು ವಾಸಮಾಡುವ ಹಳ್ಳಿಗಾಡು ಪ್ರದೇಶಗಳ ನಿವಾಸಿಗಳೆಲ್ಲಾ ತೀರ ಬಡವರೇ ಆದುದರಿಂದ, ವೈದ್ಯವೃತ್ತಿಯಿಂದ ಅವನು ಗಳಿಸಿದ ಆಸ್ತಿ ಎಂಬುದೇನೂ ಇರಲಿಲ್ಲ. ಭೈರವಸ್ವಾಮಿಯ ಮನಸ್ಸಿನಲ್ಲಿ ತಾನು ರಾಜಾಶ್ರಯ ಸಂಪಾದಿಸಬೇಕೆಂಬ ಆಶೆ ಏನೋ ಇದ್ದಿತು. ಆದರೆ ತನ್ನದು ಅನುಭವದ ವೈದ್ಯವೆಂದೂ, ವೈದ್ಯಶಾಸ್ತ್ರ ಕಲಿತ ವೈದ್ಯನು ತಾನಲ್ಲವೆಂದೂ ಅವನಿಗೆ ಗೊತ್ತಿತ್ತು. ಆದುದರಿಂದ ತಾನು ಸಾಮಾನ್ಯ ವೈದ್ಯವೆಂದೇ ತಿಳಿದು ಹುಟ್ಟಿ ಬೆಳೆದ ಗ್ರಾಮದಲ್ಲಿಯೇ ಇದ್ದು ತನ್ನ ದಿನಗಳನ್ನು ಕಳೆದನು. ಮನಸ್ಸಿನ ಆಶೆಯನ್ನು ಪೂರಯಿಸಲು ಅವನಿಂದಾಗಲಿಲ್ಲ.

ಆ ಭೈರವಸ್ವಾಮಿಗೆ ಒಂದುಸಾರಿ ಏನೋ ದೊಡ್ಡ ಕಾಯಿಲೆ ಬಂದಿತು. ಅನೇಕ ದಿನಗಳವರೆಗೆ ಹಾಸಿಗೆ ಹಿಡಿದನು. ಇನ್ನು ತಾನು ಬದುಕಿ ಏಳಲಾರೆನೆಂಬ ಅನುಮಾನ ಉಂಟಾಗಿ ಅವನು ತನ್ನ ಮಗನನ್ನು ಬಳಿಗೆ ಕರೆದು, "ಮಗನೇ, ಕುಮಾರಸ್ವಾಮೀ! ನನ್ನ ಅಂತಿಮ ಗಳಿಗೆಗಳು ಸಮೀಪಿಸುತ್ತಾ ಇದೆ. ನೀನು ಹದಿನಾರು ವರ್ಷ ಪ್ರಾಯದವನಾಗಿರುವಿ. ನಿನಗಾಗಿ ನಾನೇನೂ ಆಸ್ತಿ ಮಾಡಿಡಲಿಲ್ಲ. ಯಾವುದಕ್ಕೂ ಅರ್ಧಂಬರ್ಧ ಜ್ಞಾನವು ಅಪಾಯಕಾರಿಯಾದುದು. ನೀನು ನನ್ನಿಂದ ಕಲಿತ ವೈದ್ಯವಿದ್ಯೆ ನಿನಗೇನೂ ಪ್ರಯೋಜನಕ್ಕೆ ಬರುವಂತಹುದಲ್ಲ. ಆದುದರಿಂದ ವೈದ್ಯನಾಗಿರಬೇಡ. ನೀನು ನಮ್ಮ ಗ್ರಾಮಸ್ಥರ ಸಹಾಯದಿಂದ ವ್ಯವಸಾಯವನ್ನು ಮಾಡಲು ಶುರುಮಾಡಿ ಸುಖವಾಗಿ ಬದುಕಬೇಕೆಂಬುದು ನನ್ನ ಆಸೆಯಪ್ಪ" ಎಂದನು.

ಕುಮಾರಸ್ವಾಮಿ ಬಹಳ ಬುದ್ಧಿವಂತನೂ, ಚುರುಕಾದವನೂ, ಅದರ ಮೇಲೆ ಬಹಳ ಹಟಗಾರನೂ ಆಗಿದ್ದನು.

ಅವನಿಗೆ ತಾನು ಬಹಳ ಸಾಧನೆ ಮಾಡಿ ಯಾವುದೋ ಒಂದು ದಿನ ವೈದ್ಯಶಾಸ್ತ್ರದಲ್ಲಿ ತಾನೊಂದು ನಿಧಿಯಂತಾಗಿ, ರಾಜಧಾನಿಯ ನಗರವನ್ನು ಸೇರಿ, ಧಂಡಿಯಾಗಿ ಧನಾರ್ಜನೆ ಮಾಡುತ್ತ ಸುಖಭೋಗಗಳನ್ನು ಅನುಭವಿಸಬೇಕೆಂದು ಅಂದುಕೊಂಡಿದ್ದನು.



ಆ ಕಾರಣದಿಂದ ಅವನು ತಂದೆಯೊಂದಿಗೆ, "ಅಪ್ಪಾ, ನೀವು ಈಗಲೇ ಸಾಯುವುದನ್ನು ಕುರಿತು ಆಲೋಚಿಸಬೇಡಿರಿ. ನೀವು ಮತ್ತೆ ಆರೋಗ್ಯಶಾಲಿಗಳಾಗಿ ಏಳುವ ಅವಕಾಶವಿದ್ದೇ ಇದೆ. ಒಂದು ವೇಳೆ ದುರದೃಷ್ಟದಿಂದ ಹಾಗೆ ನಡೆಯದೇ ಹೋದರೆ, ನಾನು ಮಾತ್ರ ವ್ಯವಸಾಯದ ವೃತ್ತಿಯನ್ನು ಎಂದಿಗೂ ಹಿಡಿಯಲಾರೆನು. ವೈದ್ಯನಾಗಿಯೇ ಜೀವಿಸುತ್ತೇನೆ" ಎಂದನು.

ಮಗನ ಉತ್ತರವನ್ನು ಕೇಳಿ ಭೈರವಸ್ವಾಮಿ ಆಶ್ಚರ್ಯಪಡುತ್ತಾ, "ಹಾಗಾದರೆ ನಿನಗಿರುವ ಈ ಸ್ವಲ್ಪ ಜ್ಞಾನದಿಂದಲೇ ನೀನು ರೋಗಿಗಳಿಗೆ ಚಿಕಿತ್ಸೆ ಮಾಡಬೇಕೆಂದಿರುವಿಯೇನು? ನಾನು ಹಾಗಿದ್ದುದರಿಂದಲೇ ಅದರಿಂದಾಗುವ ತೊಂದರೆಗಳಿಂದ ನಿನಗೆ ಹೀಗೆ ಹೇಳಿದೆನಪ್ಪಾ. ಅದೆಷ್ಟು ಅಪಾಯಕರವೆಂದು ನಿನಗೆ ಗೊತ್ತಿದೆಯೇ?" ಎಂದು ಕೇಳಿದನು ಭೈರವಸ್ವಾಮಿ.

"ನನ್ನ ವೈದ್ಯಕೀಯದ ಜ್ಞಾನ ಸ್ವಲ್ಪವೆಂದು ನನಗೆ ಗೊತ್ತಿದೆ ಅಪ್ಪಾ. ಆದರೆ ಪ್ರಾಥಮಿಕ ವೈದ್ಯವಿದ್ಯಾರ್ಥಿಯಾಗಿ ನೋಡುವುದಾದರೆ ನನಗಿರುವ ಪರಿಜ್ಞಾನವು ಬಹಳ ಹೆಚ್ಚೇ. ನಾನು ಹೇಗಾದರೂ ಮಾಡಿ ಮಹೇಂದ್ರಯೋಗಿಯ ಹತ್ತಿರ ಶಿಷ್ಯನಾಗಿ ಸೇರಬೇಕೆಂದಿದ್ದೇನೆ. ನನ್ನ ಚಿಂತೆ ನಿಮಗೆ ಬೇಡ ಅಪ್ಪಾ" ಎಂದನು ಕುಮಾರಸ್ವಾಮಿ.

ಮಗನು ಹೇಳಿದ ಈ ಮಾತಿನಿಂದ ಭೈರವಸ್ವಾಮಿಗೆ ಸಂತೋಷವಾಯಿತು. ಮಹೇಂದ್ರಯೋಗಿ ಅಲ್ಲಿಗೆ ಆರು ಹರದಾರಿ ದೂರದಲ್ಲಿರುವ ಅರಣ್ಯದೊಳಗೆ ಒಂದು ಗುರುಕುಲವನ್ನು ನಡೆಯಿಸಿಕೊಂಡಿದ್ದನು. ಅವನು ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದ ಮಹಾ ಪಂಡಿತನು, ಮುಖ್ಯವಾಗಿ ಯೋಗಶಾಸ್ತ್ರದಲ್ಲಿ ಅವನಿಗೆ ಸಾಟಿಯಾದವರಿಲ್ಲವೆಂದು ಹೇಳುತ್ತಿದ್ದರು. ಆದರೆ ಅವನು ಅಷ್ಟೊಂದು ಸುಲಭವಾಗಿ ಯಾರನ್ನೂ ತನ್ನ ಶಿಷ್ಯನಾಗಿ ಮಾಡಿಕೊಳ್ಳುವವನಲ್ಲ. ಅದಕ್ಕೆ ಅನೇಕ ಅರ್ಹತೆಗಳು ಬೇಕಾಗಿದ್ದುವು. ಅದಕ್ಕೆ ತಕ್ಕ ಪರೀಕ್ಷೆಗಳಿದ್ದುವು. ಆ ಪರೀಕ್ಷೆಗಳಲ್ಲಿ ಗೆಲ್ಲುವುದು ಸುಲಭವೇನಲ್ಲ.

ತಂದೆ ಮಗಂದಿರ ನಡುವೆ ಸಂಭಾಷಣೆ ನಡೆದ ಒಂದು ವಾರದ ಮೇಲೆ ಭೈರವಸ್ವಾಮಿ ತೀರಿ ಹೋಗಿಬಿಟ್ಟನು.

ಕುಮಾರಸ್ವಾಮಿ ತಂದೆಗೆ ಅಂತ್ಯಕ್ರಿಯೆಗಳನ್ನು ಮಾಡಿ ಮುಗಿಸಿದ ಮೇಲೆ ಒಂದು ಒಳ್ಳೆಯ ದಿನ ನೋಡಿ, ಮಹೇಂದ್ರಯೋಗಿಯ ಗುರುಕುಲಕ್ಕೆ ಹೋದನು.

ಮಹೇಂದ್ರಯೋಗಿ ಕುಮಾರಸ್ವಾಮಿಯನ್ನು "ಯಾವ ವಿದ್ಯೆ ಕಲಿಯಬೇಕೆಂದಿರುವಿ?" ಎಂದು ಪ್ರಶ್ನಿಸಿ, ಅವನು ವೈದ್ಯವಿದ್ಯೆ ಎಂದು ಹೇಳಿದ ಕೂಡಲೇ ಅವನಿಗೆ ಕೆಲವು ಪರೀಕ್ಷೆಗಳನ್ನು ಇಟ್ಟನು. ಅವರಲ್ಲಿ ಕುಮಾರಸ್ವಾಮಿ ಸುಲಭವಾಗಿಯೇ ಗೆದ್ದ



ಮೇಲೆ ತನ್ನ ಶಿಷ್ಯನಾಗಿರುವಂತೆ ಸ್ವೀಕರಿಸಿಕೊಂಡನು ಮಹೇಂದ್ರಯೋಗಿ.

ಆ ಸಮಯಕ್ಕೇ ಮಹೇಂದ್ರಯೋಗಿ ಹಣ್ಣು ಹಣ್ಣು ಮುದುಕನಾಗಿದ್ದನು. ಕುಮಾರಸ್ವಾಮಿ ಅವನ ಹತ್ತಿರ ನಾಲ್ಕು ವರ್ಷಗಳವರೆಗೆ ವೈದ್ಯ ವಿದ್ಯೆ ಅಭ್ಯಾಸಮಾಡಿ, ಆ ಶಾಸ್ತ್ರದ ವಿದ್ಯಾರ್ಥಿಗಳಲ್ಲಿ ಅವನೇ ಪ್ರಥಮನೆನಿಸಿಕೊಂಡನು. ಈ ಕಾರಣದಿಂದಾಗಿ ಮಹೇಂದ್ರಯೋಗಿಗೆ ಕುಮಾರಸ್ವಾಮಿಯ ಮೇಲೆ ಅತ್ಯಂತ ವಾತ್ಸಲ್ಯ ಉಂಟಾಯಿತು.

ಒಂದು ದಿನ ಮಹೇಂದ್ರಯೋಗಿ ಎಲ್ಲಾ ವಿದ್ಯಾರ್ಥಿಗಳನ್ನೂ ಸಮಾವೇಶಗೊಳಿಸಿ, ಇನ್ನು ಮೇಲೆ ತನ್ನ ಸ್ವಲ್ಪಕಾಲದ ಶೇಷಜೀವಿತವನ್ನು ತಪಸ್ಸಿನಲ್ಲಿ ಕಳೆಯಲಿರುವೆನೆಂದು ಹೇಳಿ, "ಇನ್ನು ಇಲ್ಲಿ ಗುರುಕುಲವು ಇಲ್ಲ. ಎಲ್ಲರೂ ಅವರವರ ಮನೆಗೆ ಹೊರಟು ಹೋಗಬಹುದು. ಹಾಗೆ ಹೊರಟು ಹೋಗುವುದಕ್ಕೆ ಮೊದಲು ಕಡೇಸಾರಿಯಾಗಿ ನನ್ನಿಂದ ನೀವು ಏನು ಕೇಳಿಕೊಳ್ಳುವಿರೆಂಬುದನ್ನು ಮನಸ್ಸು ತೆರೆದು ಹೇಳಿಬಿಡಿರಿ" ಎಂದನು.

ಹಾಗೆ ಹೇಳಿ ಮಹೇಂದ್ರಯೋಗಿ ತನ್ನ ಕೋಣೆಗೆ ಹೋಗಿ, ಒಬ್ಬೊಬ್ಬ ವಿದ್ಯಾರ್ಥಿಯನ್ನೇ ಕರೆದು, ಅವನ ಕೋರಿಕೆ ಏನೆಂದು ತಿಳಿದುಕೊಂಡನು. ಹಾಗೆಯೇ ಕುಮಾರಸ್ವಾಮಿಯ ಸರದಿಯೂ ಬಂದಿತು. ಅವನು ಗುರುವಿನ ಪಾದಗಳಿಗೆ ನಮಸ್ಕಾರ ಮಾಡಿ, "ಸ್ವಾಮೀ, ನಮ್ಮ ಪರಂಪರೆಯ ಹಿರಿಯರು ಅನೇಕ ತಲೆಮಾರುಗಳಿಂದ ವೈದ್ಯವೃತ್ತಿಯಿಂದಲೇ ಜೀವಿಸಿಕೊಂಡಿದ್ದವರು. ಆದರೆ ಯಾರಿಂದಲೂ ದಾರಿದ್ರ್ಯದ ರೇಖೆಯನ್ನು ದಾಟಿ ಶ್ರೀಮಂತಿಕೆಗೆ ಮುಟ್ಟಲು ಸಾಧ್ಯವಾಗಲಿಲ್ಲ" ಎಂದನು.

"ಹಾಗೇನು ? ಸರಿ. ನೀನೀಗ ಏನನ್ನು ಅಪೇಕ್ಷಿಸುತ್ತೀ ? " ಎಂದು ಕೇಳಿದನು ಮಹೇಂದ್ರಯೋಗಿ.

"ಸ್ವಾಮೀ, ಜನನವು ಎಷ್ಟು ಸತ್ಯವೋ, ಮೃತ್ಯುವೂ ಅಷ್ಟೇ ಸತ್ಯವಾದುದು. ಮನುಷ್ಯನು ಸಾಯುವುದರೊಳಗೆ ಅವನನ್ನು ಬಾಧಿಸುವುದು ಪೀಡಾಕಾರದ ವ್ಯಾಧಿಗಳೇ ಅಲ್ಲವೆ ? ಆ ವ್ಯಾಧಿಗಳನ್ನು ಗುಣಪಡಿಸುವಂತಹ ದಿವ್ಯ ಶಕ್ತಿಯಿರುವಂತಹ ಯಾವುದಾದರೊಂದನ್ನು ದಯವಿಟ್ಟು ನೀವು ನನಗೆ ಪ್ರಸಾದಿಸಬೇಕು" ಎಂದನು ಕುಮಾರಸ್ವಾಮಿ.

ಆ ಮಾತು ಕೇಳಿ ಮಹೇಂದ್ರಯೋಗಿ ಆಶ್ಚರ್ಯಪಡುತ್ತಾ, "ಅಪ್ಪಾ, ಆಯುಷ್ಯ ತೀರುವ ಸಮಯ ಬಂದರೆ ಯಾವ ಔಷಧವೂ ಉಪಯೋಗವಾಗುವುದಿಲ್ಲ. ಅಂದರೆ ನಾನು ಇಲ್ಲಿ ಹೇಳಲೆಳಸುವುದು, ರೋಗಿಯ ಶಾರೀರಕ, ಮಾನಸಿಕ ಸ್ಥಿತಿಯನ್ನು, ಆ ಸಮಯದಲ್ಲಿ ಔಷಧವೆಂಬುದು ಕೇವಲ ಉಪಶಮನದ ವಸ್ತುವಷ್ಟೇ. ಆದರೂ ನೀನು ಅಪೇಕ್ಷೆಪಟ್ಟಿರು

ವುದರಿಂದ ನಿನಗೊಂದು ಶಕ್ತಿಯನ್ನು ಪ್ರಸಾದಿಸುತ್ತೇನೆ. ನೀನು ಚಿಕಿತ್ಸೆಮಾಡುವ ರೋಗಿಯ ತಲೆದಿಂಬಿನ ಬದಿಯಲ್ಲಿ ಯಮನ ವಾಹನವಾದ ಮಹಿಷವಿರುವುದು ಕಂಡರೆ, ಆ ರೋಗಿಯ ಆಯುಷ್ಯ ತೀರಿತೆಂದು ಅರ್ಥ ಮಾಡಿಕೋ. ಆಗ ಆ ರೋಗಿಗೆ ಯಾವ ಔಷಧ ಕೊಟ್ಟರೂ ವ್ಯರ್ಥವೇ. ಆ ಮಹಿಷವು ನಿನಗೊಬ್ಬನಿಗೆ ಮಾತ್ರವೇ ಕಾಣುತ್ತದೆ!" ಎಂದು ಹೇಳಿ ಕುಮಾರಸ್ವಾಮಿಯ ತಲೆಯ ಮೇಲೆ ಕೈಯಿಟ್ಟು ಏನೋ ಮಂತ್ರ ಜಪಿಸಿದನು.

ಕುಮಾರಸ್ವಾಮಿ ಗುರುಗಳು ಹೇಳಿದ ವರಕ್ಕೆ ಬಹಳ ಸಂತೋಷಪಡುತ್ತಾ, "ಸ್ವಾಮೀ, ತಮ್ಮ ದಯಕ್ಕೆ ತುಂಬಾ ಕೃತಜ್ಞನಾಗಿರುತ್ತೇನೆ. ನನ್ನ ವೈದ್ಯವೃತ್ತಿಯಲ್ಲಿ ಒಂದೇ ಒಂದುಸಾರಿ ಆ ಮಹಿಷವನ್ನು ಓಡಿಸಿಬಿಡಲಿಕ್ಕೆ ಏನಾದರೂ ಸಾಧನೆಯನ್ನು ಹೇಳಬೇಕು" ಎಂದು ಬೇಡಿಕೊಂಡನು.

ಮಹೇಂದ್ರಯೋಗಿ ಕ್ಷಣಕಾಲ ಆಲೋಚಿಸಿ, "ನೀನು ಯಮನ ಮಹಿಷವನ್ನು ಓಡಿಸುವುದರ ಮೂಲಕ ರೋಗಿಯ ಪ್ರಾಣವನ್ನು ಕಾಪಾಡಬೇಕೆಂಬ ಅಗತ್ಯದ ದಿನವು ಬಂದರೆ, ಆಮೇಲೆ ನೀನು ವೈದ್ಯ ವೃತ್ತಿಯನ್ನೇ ಬಿಟ್ಟುಬಿಡಬೇಕಾಗಿ ಬರುತ್ತದೆ. ಈ ಸಂಗತಿ ನೆನಪಿಟ್ಟುಕೋ. ಇನ್ನು ಆ ಮಹಿಷವನ್ನು ಓಡಿಸುವ ಸಾಧನವು ಇದು. ನೀನು ಮನಸ್ಸಿನಲ್ಲಿ ಕನಕದುರ್ಗೆಯ ವಾಹನವಾದ ವ್ಯಾಘ್ರವನ್ನು ನೆನೆದುಕೊಂಡು, 'ಇಕೋ ವ್ಯಾಘ್ರ! ಮಹಿಷರಾಜಾ, ಓಡಿಹೋಗು' ಎಂದು ಹೇಳು. ಕೂಡಲೇ ಮಹಿಷವು ಅದೃಶ್ಯವಾಗುತ್ತದೆ. ರೋಗಿ ಬದುಕುತ್ತಾನೆ" ಎಂದನು.

ಕುಮಾರಸ್ವಾಮಿ ಗುರುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅವನ ಪಾದಧೂಳಿಯನ್ನು ತಲೆಯ ಮೇಲೆ ಧರಿಸಿಕೊಂಡು ಮನೆಗೆ ಹಿಂದಿರುಗಿ ಬಂದನು.

ಕುಮಾರಸ್ವಾಮಿ ರೋಗಿಗಳನ್ನು ಪರೀಕ್ಷಿಸಿ ವೈದ್ಯ ಚಿಕಿತ್ಸೆ ಮಾಡಲು ಪ್ರಾರಂಭಿಸಿದ ರೋಗಿಗಳೆಲ್ಲರೂ, ಸ್ವಸ್ಥರಾಗುತ್ತಾ ಬಂದರು. ಆದರೆ ಅಪರೂ ಕೆಲವು



# ಬಾಣದ ಗುರಿ

ನಲವತ್ತು ವರ್ಷ ಪ್ರಾಯದವನಾದ ವೀರಣ್ಣನೆಂಬವನಿಗೆ ಇದ್ದಕ್ಕಿದ್ದ ಹಾಗೆ ಜೀವಿತ ಕಾಲದಲ್ಲಿ ತಾನು ಏನನ್ನೂ ಸಾಧಿಸಿಲ್ಲವೆಂಬ ಆಲೋಚನೆ ಬಂದುಬಿಟ್ಟಿತು. ಅವನ ಕಣ್ಣೆದಿರಿನಲ್ಲಿಯೇ ಎಷ್ಟೋ ಜನರು ಲಕ್ಷಾಧಿಕಾರಿಗಳಾದರು. ಕಲಾಕಾರರಾದರು. ಕೀರ್ತಿಶಾಲಿಗಳಾದರು. ತಾನು ಮಾತ್ರ ಒಬ್ಬ ಅನಾಮಧೇಯನೇ ಆಗಿದ್ದೇನೆ!

ವೀರಣ್ಣನು ಇನ್ನು ಬದುಕುವುದು ವ್ಯರ್ಥವೆಂದು ಆಲೋಚಿಸಿ, ಅಡವಿಗೆ ಹೋದನು. ಅಲ್ಲಿ ಒಬ್ಬ ಸಾಧು ಅವನಿಗೆ ಇದಿರಾದನು. "ಕ್ರೂರ ಮೃಗಗಳಿರುವ ಈ ಅಡವಿಗೆ ನೀನೇಕೆ ಬಂದೆ?" ಎಂದು ಕೇಳಿದನು ಆ ಸಾಧು.

"ಸ್ವಾಮಿ, ನಾನು ಜೀವಿತದಲ್ಲಿ ಏನೊಂದನ್ನೂ ಸಾಧಿಸಿದವನಲ್ಲ. ಆದರಿಂದ ವಿರಕ್ತನಾಗಿ ಈ ಕಾಡಿಗೆ ಬಂದೆ" ಎಂದನು.

ಸಾಧು ಮುಗುಳು ನಗುತ್ತ, "ಏನನ್ನೂ ಸಾಧಿಸಲಿಲ್ಲವೆಂದು ನೀನು ಸಂಕಟಪಡುತ್ತಿರುವಿ. ಚೆನ್ನಾಗೇ ಇದೆ. ಹಾಗಾದರೆ ಜೀವಿತದಲ್ಲಿ ಏನು ಸಾಧಿಸಬೇಕೆಂದು ಅಂದುಕೊಂಡಿದ್ದಿಯಪ್ಪಾ?" ಎಂದು ಕೇಳಿದನು.

ಅದೇನೂ ಇಲ್ಲವೆಂದು ವೀರಣ್ಣನು ತಲೆಯಾಡಿಸಿದನು. ಅದಕ್ಕೆ ಸಾಧು, "ಬಾಣಕ್ಕೆ ಗುರಿಯನ್ನು ಇಡದೆ ಲಕ್ಷ್ಯಕ್ಕೆ ತಾಗಲಿಲ್ಲವೆಂದು ನೊಂದುಕೊಳ್ಳುವುದು ಅವಿವೇಕವೇ ಸರಿ!" ಎಂದನು.

ಆ ಮಾತಿನಿಂದ ವೀರಣ್ಣನಿಗೆ ಕಣ್ಣು ತೆರೆದ ಹಾಗಾಯಿತು. ಆಮೇಲೆ ಅವನು ತಾನೇನೂ ಸಾಧಿಸಲಿಲ್ಲವೆಂದು ನೊಂದುಕೊಳ್ಳದೆ, ಸ್ವಲ್ಪಮಟ್ಟಿಗೆ ಕೈಲಾದುದನ್ನು ಸಾಧಿಸಿಕೊಂಡು ನೆಮ್ಮದಿಯಾಗಿರ ತೊಡಗಿದನು.





# ಬಾಧ್ಯತೆಯ ಪ್ರಶ್ನೆ

ಸಿರಿಪುರ ಸಂಸ್ಥಾನದ ಜಮೀನ್ದಾರರ ಕಚೇರಿಯಲ್ಲಿ ಸಲಹಾದಾರನ ಪದವಿಯೊಂದು ಖಾಲಿಯಾಯಿತು. ಒಳ್ಳೆಯ ಮುತ್ಸದ್ದಿಗಳಾದವರು ಆ ಕೆಲಸಕ್ಕೆ ಉಮೇದುವಾರರಾಗಿ ಬರಬಹುದೆಂದು ಪ್ರಕಟಿಸಿದರು. ಹಾಗೆ ಬಂದವರನ್ನು ಜಮೀನ್ದಾರರು ಸ್ವತಃ ಮಾತಾಡಿಸುತ್ತಿದ್ದರು. ಅದರಂತೆ ಗೌರಾಂಗ ಮತ್ತು ಗಂಭೀರ ಎಂಬುವರಿಬ್ಬರು ಜಮೀನ್ದಾರರ ಹತ್ತಿರ ಬಂದರು.

ಮೊದಲು ಜಮೀನ್ದಾರರು ಗೌರಾಂಗನನ್ನು ತಮ್ಮ ಕಚೇರಿಯ ಕೋಣೆಗೆ ಕರೆದುಕೊಂಡು ಹೋಗಿ "ನಾವು ಒಪ್ಪಿಸುವ ಕೆಲಸವನ್ನು ಒಂದು ತಪ್ಪೂ ಇಲ್ಲದೆ ನಿರ್ವಹಿಸಬಲ್ಲ ಸಾಮರ್ಥ್ಯ ನಿನಗಿದೆಯೆ ?" ಎಂದು ಕೇಳಿದರು.

ಗೌರಾಂಗನು ಸ್ವಲ್ಪವೂ ತಡಬಡಿಸದೆ, "ಅಯ್ಯಾ, ನಾನು ಇಪ್ಪತ್ತು ವರ್ಷಗಳಿಂದ ಅನೇಕ ಸಂಸ್ಥಾನಾಧೀಶರ ಹತ್ತಿರ ಸಲಹೆಯ ಕೆಲಸಮಾಡಿದ ಅನುಭವ ಉಳ್ಳವನು. ನನ್ನ ಕೆಲಸದಲ್ಲಿ ಒಂದೇ ಒಂದು ತಪ್ಪೂ ಇದುವರೆಗೆ ಆಗಿರಲಿಲ್ಲ. ನನ್ನ ಯೋಗ್ಯತೆಯನ್ನು ಮೆಚ್ಚಿಕೊಂಡು ಅವರೆಲ್ಲಾ ಕೊಟ್ಟ ಯೋಗ್ಯತಾ ಪತ್ರಗಳೇ ಅದಕ್ಕೆ ಸಾಕ್ಷಿ" ಎಂದು ಕೆಲವು ಕಾಗದಗಳನ್ನು ಜಮೀನ್ದಾರರ ಕೈಗೆ ಕೊಟ್ಟನು.

ಜಮೀನ್ದಾರರು ಅವುಗಳನ್ನು ಪಕ್ಕದಲ್ಲಿದ್ದ ದಿವಾನನಿಗೆ ಕೊಟ್ಟು, ಗಂಭೀರನನ್ನು ಕರೆಯಿಸಿದರು. ಅವರು ಗಂಭೀರನೊಂದಿಗೆ ಕೂಡಾ ಗೌರಾಂಗನನ್ನು ಕೇಳಿದ ಪ್ರಶ್ನೆಯನ್ನೇ ಕೇಳಿದರು.

ಅದಕ್ಕೆ ಗಂಭೀರನು, "ಅಯ್ಯಾ, ಒಂದೇ ಒಂದು ತಪ್ಪು ಕೂಡಾ ಆಗದಂತೆ ಎಲ್ಲಾ ಕೆಲಸಗಳನ್ನೂ ನಿರ್ವಹಿಸುವುದು ಸಾಧ್ಯವಾಗುವಂತಹುದಲ್ಲ. ಆದುದರಿಂದ ತಮಗೆ ನಾನು ಹಾಗೆ ಮಾತುಕೊಡಲು ಸಾಧ್ಯವಾಗದು. ಯಾವ ಕೆಲಸವನ್ನಾದರೂ ತಪ್ಪಾಗಬಾರದೆಂಬ ಎಚ್ಚರಿಕೆಯಲ್ಲಿ ಮಾಡುತ್ತೇನೆ" ಎಂದನು.

"ಹಾಗಿದ್ದ ಮೇಲೆ ಇಂತಹ ಉನ್ನತ ಪದವಿ ಬೇಕೆಂದು ಕೇಳಲು ಬರುವುದು ತಪ್ಪಲ್ಲವೇನು ?" ಎಂದು ಗೇಲಿಮಾಡುವಂತೆ ಕೇಳಿದರು ಜಮೀನ್ದಾರರು.

"ಕ್ಷಮಿಸಬೇಕು. ಮಾಡಿದ ಕೆಲಸದಲ್ಲಿ ಏನಾದರೂ ತಪ್ಪು ನಡೆದರೆ, ಅದನ್ನು ತಿಳಿದು ಸರಿಯಾದ ಸಮಯದಲ್ಲಿ ತಿದ್ದಿಕೊಂಡು ಮತ್ತೆ ಅಂತಹ ತಪ್ಪು ನಡೆಯದಂತೆ ಕಾರ್ಯ ನಡೆಸುವ ಸಮರ್ಥತೆ

ಜಿ. ಜಿ. ರತ್ನ

ನನಗಿದೆ. ತಪ್ಪುಗಳ ಮೂಲಕ ತಿಳಿದುಕೊಂಡ ಪಾಠಗಳಿಂದ, ಅನುಭವಗಳಿಂದ ಮನುಷ್ಯನು ಒಳ್ಳೆಯ ತಿಳುವಳಿಕೆ ಗಳಿಸಿಕೊಳ್ಳುವನೆಂಬ ಸಂಗತಿ ನಿಮಗೆ ಗೊತ್ತಿಲ್ಲದ್ದಲ್ಲವೆಂದು ನಂಬಿ ಬಂದಿದ್ದೇನೆ" ಎಂದನು ವಿನಯದಿಂದ ಗಂಭೀರ.

ಜಮೀನ್ದಾರರು ತೃಪ್ತರಾದರೋ ಇಲ್ಲವೋ ? ನಾಳೆಯೇ ಬಂದು ಕೆಲಸದಲ್ಲಿ ಸೇರುವಂತೆ ಗಂಭೀರನಿಗೆ ಹೇಳಿದರು.

ಜಮೀನ್ದಾರರ ಬದಿಯಲ್ಲಿದ್ದ ದಿವಾನನಿಗೆ, ಯಜಮಾನರು ಕೂಡಲೇ ಗಂಭೀರನಿಗೆ ಕೆಲಸ ಕೊಟ್ಟುದನ್ನು ನೋಡಿ ಆಶ್ಚರ್ಯವಾಯಿತು.

"ಗೌರಾಂಗನಿಗೆ ಅನೇಕರು ಒಳ್ಳೆಯ ಯೋಗ್ಯತಾ ಪತ್ರಗಳನ್ನು ಕೊಟ್ಟಿದ್ದಾರೆ. ಅವನು ಈ ಮೊದಲು ನಿರ್ವಹಿಸಿದ ಪದವಿಗಳಲ್ಲಿ ಒಂದು ತಪ್ಪು ಕೂಡಾ ಮಾಡಿದಂತೆ ಕಾಣುವುದಿಲ್ಲ. ತಾವು ಅಂತಹವನನ್ನು ಬಿಟ್ಟು, ಯಾವ ಅರ್ಹತೆಯನ್ನು ನೋಡಿ ಗಂಭೀರನಿಗೆ ಉದ್ಯೋಗ ಕೊಟ್ಟಿರೆಂಬುದು ಅರ್ಥವಾಗಲಿಲ್ಲ" ಎಂದನು ದಿವಾನ.

ದಿವಾನನ ಸಂದೇಹವನ್ನು ಕೇಳಿ ಜಮೀನ್ದಾರರು ನಗುತ್ತ, "ಗೌರಾಂಗನು ಕಾರ್ಯ ನಿರ್ವಹಣೆಯಲ್ಲಿ ತಾನು ಎಂದಿಗೂ ಒಂದು ತಪ್ಪು ಕೂಡಾ ಮಾಡಲಿಲ್ಲ ನೆನ್ನುತ್ತಾನೆ. ಆ ಮಾತನ್ನು ನಂಬುವುದು ಹೇಗೆ? ಅಂತಹವರು ಸ್ವಂತವಾಗಿ ಯಾವ ಕೆಲಸವನ್ನೂ ಮಾಡದೆ ಸಹಾಯಕರ ಮೇಲೆಯೇ ಆಧಾರಪಟ್ಟಿರುತ್ತಾರೆ. ಏನಾದರೂ ತಪ್ಪು ನಡೆದರೆ ಅವರು ಬುದ್ಧಿವಂತಿಕೆಯಿಂದ ಅವರ ಮೇಲೆ ಜಾರಿಸುತ್ತಾರೆ. ಒಂದು ತಪ್ಪು ಕೂಡಾ ನಡೆಯದಂತೆ ಜವಾಬ್ದಾರಿಯ ಕಾರ್ಯಗಳ ಪದವಿಯನ್ನು ಅಷ್ಟು ಕಾಲ ನಿರ್ವಹಿಸಲು ಯಾರಿಗೂ ಸಾಧ್ಯವಾಗದು. ಅಲ್ಲವೇನು ? ನಿಮಗೆ ಹೇಗೆನಿಸುತ್ತದೆ ? " ಎಂದನು.

ದಿವಾನನು, ಜಮೀನ್ದಾರರು ಹೇಳಿದುದರಲ್ಲಿ ತುಂಬಾ ವಾಸ್ತವತೆ ಇರುವುದನ್ನು ತಿಳಿದು, "ಹೌದು, ನೀವು ಹೇಳಿದುದು ನಿಜವೇ" ಎಂದನು.

"ಏನಾದರೂ ಜವಾಬ್ದಾರಿಯನ್ನು ನಿರ್ವಹಿಸುವಾಗ ತಪ್ಪುಗಳು ನಡೆಯುವ ಅವಕಾಶವಿದೆ ಎಂದು ಗುರುತಿಸಿದವನು ಗಂಭೀರನೇ. ಅಂತಹವುಗಳನ್ನು ಬಚ್ಚಿಟ್ಟು ಮುಚ್ಚಿಟ್ಟುಕೊಳ್ಳುವುದಕ್ಕಿಂತ ಸರಿತಿದ್ದಿಕೊಳ್ಳುವುದು ಒಳ್ಳೆಯದೆಂದು ಅವನಿಗೆ ಗೊತ್ತಿದೆ. ಆ ಕಾರಣದಿಂದಲೇ ಸಲಹಾದಾರನಾಗಿರಲು ಅವನು ಅರ್ಹನೆಂದು ನಿಶ್ಚಯಿಸಿದೆನು" ಎಂದರು ಜಮೀನ್ದಾರರು.

ಗಂಭೀರನು ತನಗೆ ಕೊಟ್ಟ ಪದವಿಯಲ್ಲಿ ಒಳ್ಳೆಯ ಹೆಸರು ಗಳಿಸಿಕೊಂಡು, ಕಾಲಕ್ರಮದಲ್ಲಿ ದಿವಾನನಾಗಿಯೂ ಆದನು.





# ಮೂಗ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಮದ್ರದೇಶದ ರಾಜಕುಮಾರಿ ಚಂದ್ರಾದೇವಿ ಬ್ರಹ್ಮದತ್ತ ರಾಜನಿಗೆ ಪಟ್ಟದ ರಾಣಿಯಾಗಿದ್ದಳು. ಮದುವೆಯಾಗಿ ಎಷ್ಟು ಕಾಲವಾದರೂ ಅವಳಿಗೆ ಸಂತಾನವಾಗಲಿಲ್ಲ. ಅದು ಪ್ರಜೆಗಳಿಗೂ ಚಿಂತೆಯನ್ನುಂಟುಮಾಡಿತು. ಪ್ರಜಾಪ್ರಮುಖರು ರಾಜನ ಬಳಿಗೆ ಬಂದು, ಸಂತಾನ ಪ್ರಾಪ್ತಿಯಾಗುವಂತೆ ಪಟ್ಟದ ರಾಣಿ ಏನಾದರೂ ವ್ರತ ಮಾಡುವಂತೆ ಕೇಳಿಕೊಂಡರು. ರಾಜನು ರಾಣಿಯೊಂದಿಗೆ ಆ ಸಂಗತಿ ಹೇಳಿದನು.

ಆ ಪ್ರಕಾರ ರಾಜನ ಅಪೇಕ್ಷೆಯಂತೆ ಚಂದ್ರಾದೇವಿ ಅನೇಕ ವ್ರತಗಳನ್ನು ಮಾಡಿದಳು. ಒಂದು ಪೌರ್ಣಮಿಯ ದಿನ ಅವಳು ಉಪವಾಸವಿದ್ದು, "ನಾನು ಶೀಲವತಿ ಎಂಬುದು ನಿಜವಾಗಿದ್ದರೆ ನನಗೆ ಒಬ್ಬ ಮಗನು ಹುಟ್ಟಬೇಕು" ಎಂದು ಆಣೆ ಹಾಕಿ ಬೇಡಿಕೊಂಡಳು.

ದೇವತೆಗಳಿಗೆ ರಾಜನಾದ ಇಂದ್ರನು ಚಂದ್ರಾದೇವಿಯ ಕೋರಿಕೆಯನ್ನು ನೆರವೇರಿಸಬೇಕೆಂದು ನಿಶ್ಚಯಿಸಿಕೊಂಡನು. ಆದರೆ ಆ ಪುಣ್ಯವತಿಯ ಗರ್ಭವಾಸಿಯಾಗಿರಲು ಯಾವನು ಯೋಗ್ಯನೆಂದು ಆಲೋಚಿಸುವಾಗ ಅವನಿಗೆ ಬೋಧಿಸತ್ವನ ನೆನಪು ಬಂದಿತು.

ಬೋಧಿಸತ್ವನು ಈ ಮೊದಲು ಕೂಡಾ ಕಾಶೀರಾಜನಿಗೆ ಮಗನಾಗಿ ಜನಿಸಿ, ಇಪ್ಪತ್ತು ವರ್ಷ ರಾಜ್ಯವನ್ನು ಪಾಲಿಸುವಾಗ, ತಾನು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವಾಗಿ ಎಂಬತ್ತು ವರ್ಷ ಉಷ್ಣವ ನರಕವನ್ನು ಅನುಭವಿಸಿಕೊಂಡಿದ್ದನು. ಆ ಮೇಲೆ ದೇವಲೋಕದಲ್ಲಿ ನಿಶ್ಚಿಂತನಾಗಿರುತ್ತ, ಅಲ್ಲಿಯ ತನ್ನ ಕಾಲಗಡು ತೀರಿದ ಮೇಲೆ ಈಗ ಊರ್ಧ್ವಲೋಕಗಳಿಗೆ ಹೋಗಲು ಸಿದ್ಧತೆ ಮಾಡಿಕೊಳ್ಳುತ್ತಿದ್ದನು.

ಆ ಸಮಯದಲ್ಲಿ ಇಂದ್ರನು ಬೋಧಿಸತ್ವನ ಬಳಿಗೆ ಹೋಗಿ, "ಮಿತ್ರನೇ, ನೀನು ಹೋಗಿ ಮಾನವ ಲೋಕದಲ್ಲಿ ಜನ್ಮಿಸಿದೆಯಾದರೆ ಎಷ್ಟೋ ಪುಣ್ಯ ಸಂಪಾದಿಸಬಹುದು. ಅಷ್ಟೇ ಅಲ್ಲದೆ ಮಾನವ ಕೋಟಿಯನ್ನು ಉದ್ಧರಿಸಿದವನೂ ಆಗುವೆ. ಕಾಶೀ ರಾಜನೂ, ಅವನ ಹೆಂಡತಿ ಮಹಾ ಸಾಧ್ವಿ ಚಂದ್ರಾದೇವಿಯೂ ಪುತ್ರಾಪೇಕ್ಷೆಯಿಂದ ಎಷ್ಟೋ



ವ್ರತಗಳನ್ನು ಮಾಡುತ್ತಿದ್ದಾರೆ. ಈಗ ನನ್ನ ಮಾತು ಕೇಳು. ನೀನು ಅವರ ಕುಮಾರನಾಗಿ ಹುಟ್ಟಿಬಿಡು" ಎಂಧು ಕೇಳಿಕೊಂಡನು. ಅದಕ್ಕೆ ಸಮ್ಮತಿಸಿದನು ಬೋಧಿಸತ್ವ.

ಬೋಧಿಸತ್ವನು ಚಂದ್ರಾದೇವಿಯ ಗರ್ಭವನ್ನು ಪ್ರವೇಶಿಸಿದ ಸಮಯದಲ್ಲಿಯೇ ಅವನ ಅನುಚರರಾದ ದೇವತೆಗಳು ಕೂಡಾ ಅವನನ್ನು ಬಿಟ್ಟಿರಲಾಗದೆ, ಐನೂರು ಮಂದಿ ದೇವತೆಗಳು ಕಾಶೀರಾಜನ ಪರಿವಾರದೊಳಗಿನವರ ಹೆಂಡತಿಯರ ಗರ್ಭಗಳಲ್ಲಿ ಪ್ರವೇಶಿಸಿದರು.

ಸಕಾಲದಲ್ಲಿ ಚಂದ್ರಾದೇವಿ ಅನೇಕ ಶುಭಲಕ್ಷಣಗಳಿಂದ ಕೂಡಿದ ಪುತ್ರನನ್ನು ಪ್ರಸವಿಸಿದಳು. ಆ ಸಮಯದಲ್ಲಿಯೇ ಉಳಿದ ಐನೂರು ಮಂದಿಗಳೂ ಹುಟ್ಟಿದರು. ರಾಜಕುಮಾರನ ಪ್ರಸವಕಾಲದಲ್ಲಿಯೇ ಅವರೆಲ್ಲರೂ ಹುಟ್ಟಿದುದರಿಂದ, ಅವರೆಲ್ಲಾ ತನ್ನ ಕುಮಾರನೊಂದಿಗೇ ಕೂಡಿ ಬೆಳೆದು, ಅವನಿಗೆ ಅನುಚರರಾಗಿರಬೇಕೆಂದು ರಾಜನು ಅಪ್ಪಣೆ ಮಾಡಿದನು. ತನ್ನ ಕುಮಾರನಿಗೆ ಹಾಲುಕೊಡಲು ಅರುವತ್ತನಾಲ್ಕು ಮಂದಿ ದಾಸಿಯರನ್ನು ನಿಯಮಿಸಿದನು. ತರುವಾಯ ರಾಜನು ಪಟ್ಟದ ರಾಣಿಯ ಬಳಿಗೆ ಬಂದು, ಏನಾದರೂ ಒಂದು ವರವನ್ನು ಕೇಳಿಕೋ ಎಂದನು. ಚಂದ್ರಾದೇವಿ "ಸಮಯ ಬಂದಾಗ ಕೇಳಿಕೊಳ್ಳುತ್ತೇನೆ; ಆಗ ಕೊಟ್ಟರೆ ಸಾಕು" ಎಂದು ಹೇಳಿದಳು.

ರಾಜಕುಮಾರನಿಗೆ ವಿಧಿಪ್ರಕಾರ ನಾಮಕರಣ ಮಹೋತ್ಸವ ನಡೆಯಿತು. ತೇಮಿಯನೆಂದು ಮಗುವಿಗೆ ಹೆಸರಿಟ್ಟರು. ಆ ಸಮಯದಲ್ಲಿ ರಾಜನು ಸಿದ್ಧಾಂತಿಗಳನ್ನು ನೋಡಿ, "ಕುಮಾರನಿಗೆ ಮಾರಕವಾದ ಅರಿಷ್ಟಗಳೇನಾದರೂ ಇವೆಯೆ?" ಎಂದು ಕೇಳಿದನು.

ಅವರು ಮಗುವಿನ ಲಕ್ಷಣಗಳನ್ನೆಲ್ಲಾ ಪರಿಶೀಲಿಸಿ, "ರಾಜಾ, ಈ ಬಾಲಕನಿಗೆ ಯಾವ ಬಗೆಯ ಅಪಾಯವೂ ಇಲ್ಲ. ದೀರ್ಘಾಯುಷ್ಮದವನಾಗಿರುತ್ತಾನೆ" ಎಂದರು.

ತೇಮಿಯನು ಒಂದು ತಿಂಗಳ ಪ್ರಾಯದವನಾಗಿರುವಾಗ, ಅವನನ್ನು ಚೆನ್ನಾಗಿ ಅಲಂಕರಿಸಿ ಸಭೆಯಲ್ಲಿರುವ ರಾಜನ ಬಳಿಗೆ ಎತ್ತಿಕೊಂಡು ಬಂದರು. ರಾಜನು ಮಗನನ್ನು ತನ್ನ ಮಡಿಲಲ್ಲಿ ಕುಳ್ಳಿರಿಸಿಕೊಂಡು ಆಟವಾಡಿಸತೊಡಗಿದನು. ಆ ಸಮಯದಲ್ಲಿ ನಾಲ್ಕು ಮಂದಿ ಕಳ್ಳರನ್ನು ವಿಚಾರಣೆಗಾಗಿ ರಾಜನ ಮುಂದೆ ತಂದು ನಿಲ್ಲಿಸಿದರು. ರಾಜನು ಆ ನಾಲ್ವರನ್ನೂ ವಿಚಾರಿಸಿ, ಆ ಕಳ್ಳರಲ್ಲಿ ಒಬ್ಬನಿಗೆ ಸಾವಿರ ಕೊರಡೇ ಏಟುಗಳನ್ನು ಕೊಡಬೇಕೆಂದೂ, ಎರಡನೆಯವನಿಗೆ ಆಜನ್ಮ ಕಾರಾಗಾರದಲ್ಲಿಡಬೇಕೆಂದೂ, ಮೂರನೆಯವನನ್ನು ಈಟಿಗಳಿಂದ ತಿವಿಯಬೇಕೆಂದೂ, ನಾಲ್ಕನೆಯವನನ್ನು ಶೂಲಕ್ಕೇರಿಸಬೇಕೆಂದೂ ಅಪ್ಪಣೆಮಾಡಿದನು.

ಪೂರ್ವಜನ್ಮ ಜ್ಞಾನವಿರುವ ಬೋಧಿಸತ್ವನು ಇದನ್ನೆಲ್ಲ ನೋಡಿ, "ಅಯ್ಯೋ, ನನ್ನ ತಂದೆ ರಾಜನಾಗಿರುವ ಕಾರಣದಿಂದ ತಾನೇ ನರಕವನ್ನು ಬೇಕೆಂದೇ ಕೊಂಡುಕೊಳ್ಳುವಂತಹ ಕೆಲಸ ಮಾಡುತ್ತಾನೆ ? ನಾನು ಒಂದು ಕಾಲದಲ್ಲಿ ಇಪ್ಪತ್ತು ವರ್ಷ ರಾಜನಾಗಿದ್ದುದರಿಂದ ಎಂಬತ್ತು ಸಾವಿರ ವರ್ಷ ಉಷ್ಣವ ನರಕವನ್ನನುಭವಿಸಿದೆನು. ಮತ್ತೆ ನಾನು ಈ ಕಳ್ಳರ ವಂಶದಲ್ಲಿ ಹುಟ್ಟಿದೆನೇನಿದು ? ತಾನು ಕಳ್ಳನೆಂಬುದು ತಿಳಿಯದೆ ನನ್ನ ತಂದೆ ನಾಲ್ವರು ಕಳ್ಳರನ್ನು ಅತಿಕ್ರೂರವಾದ ಶಿಕ್ಷೆಗೆ ಗುರಿ ಮಾಡುತ್ತಾನೆ. ನಾನು ಕೂಡಾ ರಾಜನಾದರೆ ನನಗೆ ನರಕ ವಾಸವು ತಪ್ಪುವಂತಿಲ್ಲ !" ಎಂದುಕೊಂಡು ಚಿಂತಿಸ ತೊಡಗಿದನು.

ಆಗಿನಿಂದ ತೇಮಿಯನಿಗೆ ಈ ಬದುಕನ್ನು ತಪ್ಪಿಸಿಕೊಳ್ಳುವುದು ಹೇಗೆ ಎಂಬ ವಿಚಾರ ಹತ್ತಿಕೊಂಡಿತು. ಆದರಿಂದ ಅವನ ಬಂಗಾರ ರಂಗಿನ ಶರೀರವು ಮಸಕಾಯಿತು. ಆಗ ಅವನಿಗೆ ತನ್ನ ಪೂರ್ವಜನ್ಮದ ತಾಯಿ ಕಾಣಿಸಿ, "ಹೆದರಬೇಡ ಕಂದಾ, ಈ ಪಾಪದ ಜೀವಿತದಿಂದ ತಪ್ಪಿಸಿಕೊಳ್ಳಬೇಕಾದರೆ, ನಾನು ಹೇಳುವ ಹಾಗೆ ಮಾಡು. ಕಿವುಡನ ಹಾಗೆ, ಮೂಕನ ಹಾಗೆ, ಕಾಲು ಬಾರದವನ ಹಾಗೆ, ಬುದ್ಧಿಯಿಲ್ಲದ ಹೆಡ್ಡನ ಹಾಗೆ ನಟಿಸಿಕೊಂಡಿರು" ಎಂದು ಉಪಾಯ ಹೇಳಿದಳು. ಹಾಗೆಯೇ ಮಾಡಲು ನಿಶ್ಚಯಿಸಿದನು ತೇಮಿಯ.

ರಾಜನ ಆಜ್ಞೆಯಂತೆ ಬೋಧಿಸತ್ವನ ಹತ್ತಿರವೇ ಉಳಿದ ಐನೂರು ಮಂದಿ ಮಕ್ಕಳನ್ನೂ ಇರಿಸಿದರು. ಆ ಮಕ್ಕಳೆಲ್ಲಾ ಹಸಿವೆಯಾದ ಕೂಡಲೇ ಹಾಲಿಗಾಗಿ ಅಳತೊಡಗಿದುವು. ಆದರೆ ಬೋಧಿಸತ್ವ ಬಾಲನೊಬ್ಬನೇ ಎಷ್ಟೇ ಹಸಿವೆಯಾದರೂ ಅಳದಿರುವವನು. "ಈ ಲೋಕದಲ್ಲಿ ನರಕ ಅನುಭವಿಸಿಕೊಂಡು ಕಷ್ಟಪಡುವುದಕ್ಕಿಂತ ಹಸಿವಿನಿಂದ ಬಾಡಿ ಒಣಗಿ



ಹೋಗಿ ಬೇಗನೇ ಸಾಯುವುದು ಎಷ್ಟೋ ಒಳ್ಳೆಯದು" ಎಂದುಕೊಂಡು ಸುಮ್ಮನಿದ್ದನು.

ದಾಸಿಯರು ಬಾಲಕನ ವಿಚಿತ್ರ ರೀತಿಯನ್ನು ನೋಡಿ, ರಾಣಿಯ ಬಳಿಗೆ ಹೋಗಿ, ರಾಜಕುಮಾರನು ಹಾಲಿಗಾಗಿ ಅಳುವುದೇ ಇಲ್ಲವೆಂದು ಹೇಳಿದರು. ಅವಳು ಈ ಸಂಗತಿ ರಾಜನೊಂದಿಗೆ ಹೇಳಿದಳು. ರಾಜನು ಬ್ರಾಹ್ಮಣರನ್ನು ಕರೆಯಿಸಿ ತನ್ನ ಕುಮಾರನ ವಿಚಿತ್ರ ವರ್ತನೆಯ ಬಗೆಗೆ ಅವರ ಸಲಹೆ ಕೇಳಿದನು.

"ಇದೇನೂ ದೊಡ್ಡ ಸಮಸ್ಯೆಯಲ್ಲ ಮಹಾರಾಜಾ. ಬಾಲಕನು ಹಾಲಿಗಾಗಿ ಅಳುವ ಅಗತ್ಯವೇನಿದೆ ? ಸರಿಯಾದ ಹೊತ್ತಿಗೆ ಹಾಲು ಕೊಟ್ಟರೆ ಗಟಗಟನೆ ಕುಡಿಯುತ್ತಾನೆ" ಎಂದರು ಬ್ರಾಹ್ಮಣರು. ದಾದಿಗಳು ಹಾಗೂ ಮಾಡಿದರು. ಕೊಡುವ ಹಾಲು ಹೊಟ್ಟೆಗೆ ಹೋಗುತ್ತಿತ್ತು ನಿಜ. ಆದರೆ ಪರೀಕ್ಷಿಸಲಿಕ್ಕಾಗಿ ಒಂದುಸಾರಿ ಹಾಲು ಕೊಡುವುದನ್ನು ನಿಲ್ಲಿಸಿ



ನೋಡಿದರು. ಎಷ್ಟು ಹೊತ್ತಾದರೂ ಕಂದನು ಅಳಲಿಲ್ಲ. ಇದು ದಾದಿಯರಿಗೆ ಆಶ್ಚರ್ಯವನ್ನುಂಟು ಮಾಡಿತು. ಅಷ್ಟು ಮಾತ್ರವಲ್ಲದೆ ತೇಮಿಯಾಯ ಬಾಲ ಉಳಿದ ಮಕ್ಕಳಂತೆ ಕೈಕಾಲುಗಳನ್ನಾಡಿಸಿ ಆಡುವುದೂ ಇಲ್ಲ. ಕೇಕೇ ಹಾಕುವುದೂ ಇಲ್ಲ. ಅವನ ಕಂಠದಿಂದ ಯಾವ ಶಬ್ದವೂ ಹೊರಡುತ್ತಿರಲಿಲ್ಲ. ಚಿಟಿಕೆ ಹಾಕಿದರೆ ಕೇಳಿಸದಂತೆ ಸುಮ್ಮನಿರುವನು. ಇದಕ್ಕೆ ಕಾರಣವೇನೆಂದು ಯಾರಿಂದಲೂ ಕಂಡುಹಿಡಿಯಲಾಗಲಿಲ್ಲ. ಚೆನ್ನಾಗಿರುವ ಮಗು ಹೀಗೇಕಿರುವನೆಂದು ಯಾರಿಗೂ ತಿಳಿಯಲಿಲ್ಲ.

ಈ ರೀತಿಯಲ್ಲಿ ಒಂದು ವರ್ಷ ಕಳೆಯಿತು. ಒಂದುಸಾರಿ ದಾಸಿಯರು ಮಿಠಾಯಿಗಳನ್ನಿಷ್ಟು ತಂದು ಎಲ್ಲಾ ಮಕ್ಕಳ ಮುಂದೆಯೂ ಇಟ್ಟು, "ತೆಗೆದುಕೊಂಡು ತಿನ್ನಿ" ಎಂದು ಹೇಳಿ ಮರೆಗೆ ಹೋಗಿ ನೋಡುತ್ತಾ ಇದ್ದರು. ಎಲ್ಲಾ ಮಕ್ಕಳೂ ನಾ ಮುಂದೆ ತಾ ಮುಂದೆ ಎಂಬಂತೆ ಮುಗಿಬಿದ್ದು ಮಿಠಾಯಿ ತಿಂದರು. ಒಬ್ಬನ ಕೈಯಿಂದೊಬ್ಬನು ಎಳೆದುಕೊಂಡನು. ತೇಮಿಯಾಯನು ಮಾತ್ರ ಸ್ವಲ್ಪ ಕೂಡಾ ಆಸಕ್ತಿ ತೋರಿಸಲಿಲ್ಲ.

ಇದನ್ನು ನೋಡಿ ರಾಣಿಯ ಗುಂಡಿಗೆ ಜಾರಿ ಹೋಯಿತು. ಅವಳು ಮಿಠಾಯಿಯನ್ನು ತೆಗೆದು "ತಿನ್ನು ನನ್ನಪ್ಪಾ" ಎನ್ನುತ್ತ ಮಗನ ಬಾಯಿಯಲ್ಲಿಟ್ಟಳು. ಬೇಕೂ ಬೇಡದಂತೆ ಅದು ನಿಧಾನವಾಗಿ ಅವನ ಬಾಯಿಯಲ್ಲಿ ಕರಗಿತು.

ಐದು ವರ್ಷ ಕಳೆಯಿತು. ಐದು ವರ್ಷ ತುಂಬಿದ ಮಕ್ಕಳಿಗೆ ಬೆಂಕಿಯ ಭಯವು ಗೊತ್ತಾಗುತ್ತದೆ. ಅಂತಲೇ ಬೆಂಕಿಯನ್ನು ನೋಡಿ ತೇಮಿಯಾಯನು ಹೆದರುವನೇ ನೋಡಲು ರಾಜನು ಮಕ್ಕಳಿಗಾಗಿ ದೊಡ್ಡದೊಂದು ಕೊಟ್ಟಿಗೆಯನ್ನು ಕಟ್ಟಿಸಿ ಅದರ ಮೇಲೆ ತಾಳೇಯೋಲೆಗಳನ್ನು ಹೊದೆಯಿಸಿದನು. ಆ ಕೊಟ್ಟಿಗೆಯಲ್ಲಿ ಎಲ್ಲಾ ಮಕ್ಕಳನ್ನೂ ಕೂಡಿಸಲಾಯಿತು. ತರುವಾಯ ಆ ಕೊಟ್ಟಿಗೆಗೆ ಬೆಂಕಿ ಹಚ್ಚಿಸಿದರು. ಬೆಂಕಿಯನ್ನು ನೋಡುತ್ತಲೇ ಐನೂರು ಮಂದಿ ಬಾಲಕರೂ ಹೆದರಿ ದೂರ ಓಡಿದರು. ತೇಮಿಯಾಯನು ಮಾತ್ರ "ನರಕದಲ್ಲಿ ಕೊಳೆಯುವುದಕ್ಕಿಂತ ಈ ಬೆಂಕಿಯಲ್ಲಿ ಸಾಯುವುದೇ ಒಳ್ಳೆಯದು" ಎಂದುಕೊಂಡು ನಿರ್ಲಿಪ್ತನಾಗಿದ್ದುಬಿಟ್ಟನು. ಬೆಂಕಿ ಅವನ ಹತ್ತಿರ ಬರುವುದರೊಳಗೆ ಯಾರೋ ಅವನನ್ನು ಎತ್ತಿಕೊಂಡು ಆಚೆಗೆ ಹೋಗಬೇಕಾಯಿತು.

ತೇಮಿಯಾಯನು ಏಳು ವಯಸ್ಸಿನವನಾದನು. ಆಗೊಮ್ಮೆ ಕೆಲವು ನಾಗರಹಾವುಗಳ ವಿಷದ ಹಲ್ಲುಗಳನ್ನು ಕಿತ್ತುಹಾಕಿ, ಮೂತಿಗಳನ್ನು ಹೊಲಿದು ಮಕ್ಕಳೆಲ್ಲರೂ ಇರುವ ಜಾಗದಲ್ಲಿ ಬಿಟ್ಟರು. ಐನೂರು ಮಂದಿ ಮಕ್ಕಳೂ ಹಾವುಗಳನ್ನು ನೋಡಿ ಹೆದರಿ ಚೆಲ್ಲಾಚೆದರಾಗಿ ಓಡಿಹೋದರು. ಆದರೆ ತೇಮಿಯಾಯನು ಕುಳಿತ ಜಾಗದಿಂದ ಕದಲಲೇ ಇಲ್ಲ.

ಹಾವುಗಳು ಅವನ ಶರೀರದ ಮೇಲೆಲ್ಲಾ ಹರಿದಾಡಿದುವು. ಅವನ ತಲೆಯ ಮೇಲೆ ಹೆಡೆಬಿಚ್ಚಿ ಆಡಿದುವು. ಆದರೂ ಅವನು ಚಲಿಸಲಿಲ್ಲ.

ಅವನ ಕಾಲುಗಳಲ್ಲಿ ಯಾವ ಲೋಪವೂ ಕಾಣಲಿಲ್ಲ. ಕಿವಿಗಳೂ, ಬಾಯಿಯೂ ಸರಿಯಾಗಿಯೇ ಇದ್ದುವು. ಅವನು ಏಕೆ ಕದಲುವುದಿಲ್ಲ, ಏಕೆ ಮಾತಾಡುವುದಿಲ್ಲ, ಏಕೆ ಕೇಳಿಸಿಕೊಳ್ಳುವುದಿಲ್ಲ ಎಂಬುದನ್ನು ಯಾರೂ ಊಹಿಸಲಾಗದೆ ಹೋದರು. ಮಕ್ಕಳು ವಿನೋದಕ್ಕಾಗಿ ನಾಟಕಗಳನ್ನು ಆಡಿದರು. ವಿನೋದವನ್ನು ನೋಡಿ ಎಲ್ಲಾ ಮಕ್ಕಳೂ ನಗೂಡುತ್ತಿರಲು, ತೇಮಿಯನು ಮಾತ್ರ ನಗಲಿಲ್ಲ. ಒಬ್ಬನು ಕತ್ತಿಯೊಂದಿಗೆ ನೃತ್ಯಮಾಡುತ್ತಾ, "ಎಲ್ಲಿ ಆ ರಾಜಕುಮಾರ? ಅವನ ತಲೆ ಕಡಿದು ಬಿಡುತ್ತೇನೆ!" ಎಂದು ಗರ್ಜಿಸಿಕೊಂಡು ಕತ್ತಿಯನ್ನೆತ್ತಿ ತೇಮಿಯನ ಮೇಲೆ ಭಯಂಕರ ಹಾವಭಾವಗಳಿಂದ ಓಡಿಬಂದನು. ಉಳಿದ ಹುಡುಗರೆಲ್ಲಾ ಕಿಟ್ಟನೆ ಕಿರಿಚಿ ಓಡಿದರು. ಆದರೆ ತೇಮಿಯನು ಒಂದಿಷ್ಟೂ ಭಯವಿಲ್ಲದವನಂತೆ ಸುಮ್ಮನೆ ಕುಳಿತಿದ್ದನು. ನೃತ್ಯ ಮಾಡುವವನು ತನ್ನ ನಟನೆ ಮುಗಿಸಿ ಅಲ್ಲಿಂದ ಹೊರಟುಹೋದನು.




ಹೀಗೆ ತೇಮಿಯನಲ್ಲಿ ಚೈತನ್ಯ ಬರುವಂತೆ ಮಾಡಲು ಏನೇನೋ ಮಾಡಿ ನೋಡಿದರು. ಅವನ ಸುತ್ತಲೂ ಆಕಸ್ಮಾತ್ತಾಗಿ ಶಂಖಗಳನ್ನು ಊದಿಸಿದರು. ಎಡೆಬಿಡದೆ ಡಕ್ಕೆಗಳ ಶಬ್ದ ಹೊರಡಿಸಿದರು. ಅವನ ಶರೀರಕ್ಕೆ ಬೆಲ್ಲದ ಮಂದ ನೀರು ಹಚ್ಚಿ ನೊಣಗಳ ಉಪದ್ರ ಬರುವ ಹಾಗೆ ಮಾಡಿದರು. ಅನೇಕ ದಿನಗಳವರೆಗೆ ಹಲ್ಲು ಉಜ್ಜದೆ, ಸ್ನಾನ ಮಾಡಿಸದೆ, ಮೈ ಮುಖ ತೊಳೆಸದೆ ಒರೆಸದೆ ಅವನ ಶರೀರದಿಂದ ದುರ್ಗಂಧವನ್ನು ಹುಟ್ಟಿಸಿ, ಆಗ ಎಲ್ಲರೂ ಅವನನ್ನು ಅವಹೇಳನ ಮಾಡುತ್ತ, "ಏನೋ ಇದು? ಎದ್ದು ಹೋಗಿ ಮೈ ಕೈ ತೊಳೆದುಕೊಂಡು ಬರಬಾರದೇನೋ? ಶುಭ್ರವಾಗಿರಬೇಕೆಂಬ ಜ್ಞಾನ ಕೂಡಾ ಇಲ್ಲವೇನೋ?" ಎಂದರು. ಗೋಡೆಗೆ ಹೇಳಿದಂತಾಯಿತು. ಕಡೆಗೆ ಅವನ ಮಂಚದ ಕೆಳಗೆ ಬೆಂಕಿ ಹಾಕಿದರು.

ಆ ಬೆಂಕಿಯಿಂದಾಗಿ ಅವನ ಶರೀರದಲ್ಲಿ ಗುಳ್ಳೆಗಳೆದ್ದುವು. "ಆ ಬೆಂಕಿಗಿಂತಲೂ ಈ ಬೆಂಕಿಯೇ ವಾಸಿ!" ಎಂದುಕೊಂಡು ತೇಮಿಯನು ಸ್ವಲ್ಪವೂ ಚಲಿಸದೆ ಮಂಚದಲ್ಲಿದ್ದನು.

ಅವನು ಚಲಿಸದೆ ಹೋದರೂ ಬಹುಕಾಲ ಮಕ್ಕಳಿಲ್ಲದೆ ಹುಟ್ಟಿದ ಮಗನು ಹೀಗಿರುವನಲ್ಲಾ ಎಂದುಕೊಂಡು ತಂದೆ ತಾಯಿಗಳು ಚಲಿಸಿದರು. ಅವರ ಹೊಟ್ಟೆ ಉರಿಯತೊಡಗಿತು. ಅವರು ಪರೀಕ್ಷೆಗಳನ್ನೆಲ್ಲಾ ಮೂಲೆಗೆ ಹಾಕಿಸಿ ಮಗನ ಬಳಿಗೆ ಬಂದು ಬೇಡಿಕೊಳ್ಳತೊಡಗಿದರು. "ಕಂದಾ, ನಿನ್ನಲ್ಲಿ ಯಾವ ಬಗೆಯ ಅವಲಕ್ಷಣವೂ ಇಲ್ಲವೆಂದು ನಮಗೆ ಗೊತ್ತಿದೆ. ಎಷ್ಟೋ ವ್ರತೋಪವಾಸಗಳನ್ನು ಮಾಡಿ

ನಿನ್ನನ್ನು ಪಡೆದಿದ್ದೇವೆ. ನೀನು ಹೀಗೆ ಮಣ್ಣುತಿಂದ ಹಾವಿನ ಹಾಗಿರುವುದರಿಂದ ನಮಗೆ ಬಹಳ ಅವಮಾನವಾಗಿದೆ. ಎದ್ದು ಎಲ್ಲಾ ಬಾಲಕರ ಹಾಗೆ ತಿರುಗಾಡಪ್ಪಾ" ಎಂದು ಅನೇಕಸಾರಿ ಬೇಡಿ ಕೊಂಡರು. ಆದರೂ ಪ್ರಯೋಜನವಿಲ್ಲದೆ ಹೋಯಿತು.

ತೇಮಿಾಯನಿಗೆ ಹದಿನಾರು ವರ್ಷಗಳು ತುಂಬಿದುವು. "ಎಂತಹ ಮೂಗನಾದರೂ, ಕಾಲಿಲ್ಲ ದವನಾದರೂ, ಯುಕ್ತವಯಸ್ಸು ಬಂದ ಮೇಲೆ ಪ್ರೇಮವೆಂಬುದು ಒಸರದೆ ಹೋಗಲಾರದು. ಆದುದರಿಂದ ನಮ್ಮವನನ್ನು ಆಕರ್ಷಿಸಲು, ನಾಟ್ಯ ಗಾರ್ತಿಯರನ್ನು ನಿಯೋಜಿಸೋಣ. ಅವರೆಲ್ಲರೂ ಅವನ ಸುತ್ತಲೂ ಆಡುತ್ತಾ, ಹಾಡುತ್ತಾ, ನೃತ್ಯ ಮಾಡಿಕೊಂಡಿದ್ದರೆ ಒಬ್ಬಳಾದರೂ ಅವನ ಮನಸ್ಸನ್ನು ಆಕರ್ಷಿಸಬಹುದು. ಹಾಗೆ ಆಕರ್ಷಿಸಿದವಳನ್ನು ಅವನಿಗೆ ಪಟ್ಟದ ರಾಣಿಯಾಗಿ ಮಾಡುತ್ತೇನೆ" ಎಂದನು ಮಹಾರಾಜ.

ತೇಮಿಾಯನನ್ನು ಪನ್ನೀರಿನಲ್ಲಿ ಸ್ನಾನಮಾಡಿಸಿ, ಒಳ್ಳೆಯ ಬಟ್ಟೆಗಳನ್ನು ತೊಡಿಸಿ ಇಂದ್ರಭವನ ದಂತಹ ಭವನದೊಳಗೆ ಹಂಸತೂಲಿಕಾತಲ್ಪದ ಮೇಲೆ ಮಲಗಿಸಿದರು. ಆ ಭವನದ ತುಂಬಾ ಹೂಗಳನ್ನು ಅತ್ತರು ಸಾಂಬ್ರಾಣಿಗಳನ್ನು ಗಮ ಗಮಾಯಿಸಿದರು. ಮದ್ಯವೇ ಮೊದಲಾದ ಮಧುರ ಪಾನೀಯಗಳನ್ನೂ ಅಳವಡಿಸಿಟ್ಟರು.

ಅಲ್ಲಿಗೆ ಅನೇಕ ಮಂದಿ ನೃತ್ಯಮಾಡುವ ಯುವತಿ ಯರು ಬಂದರು. ಅವರು ತಮ್ಮ ಬಗೆ ಬಗೆಯ ಹಾವಭಾವಗಳ ಆಟಗಳಿಂದ, ಸರಸ ಮಾತುಗಳಿಂದ ರಾಜಕುಮಾರನನ್ನು ರಂಜಿಸಲು ವಿಶ್ವಪ್ರಯತ್ನ ಮಾಡಿದರು.

ಅವನು ಆ ನೃತ್ಯ ಮಾಡುವ ಯುವತಿಯರ ಉಸಿರು ತಾಗಿದರೆ ಏನಾಗುತ್ತದೋ ಎಂದುಕೊಂಡು ಉಸಿರು ಕೂಡಾ ಬಿಗಿದು ಮರದ ಬೊಂಬೆಯ ಹಾಗೆ ಇದ್ದುಬಿಟ್ಟನು.

ಕಡೆಗೆ ಆ ಯುವತಿಯರು ತುಂಬಾ ಬೇಸತ್ತು ಮಹಾರಾಜನ ಬಳಿಗೆ ಹೋಗಿ, "ನಿಮ್ಮ ಕುಮಾರರು ಮನುಷ್ಯನೇ ಅಲ್ಲ. ರಾಕ್ಷಸನೇ ಆಗಿರಬೇಕು. ನಾವು ನಾಟ್ಯವಾಡುತ್ತಾ ಹತ್ತಿರ ಹೋದರೆ, ಸರ್ವಾಂಗ ಮರಗಟ್ಟಿಯೇ ಹೋದರು ಪ್ರಭೂ" ಎಂದು ನಿರಾಶೆಯಿಂದ ಹೇಳಿದರು.

ಹೀಗೆಲ್ಲಾ ಹದಿನಾರು ವರ್ಷಗಳ ವರೆಗೆ ಸಾಗಿಸಿದ ಎಲ್ಲಾ ಪರೀಕ್ಷೆಗಳೂ ಬೂದಿಗೆ ಹಾಕಿದ ಪನ್ನೀರೇ ಆಯಿತು. ತೇಮಿಾಯನ ರಹಸ್ಯವೇನೆಂದು ಯಾರಿಗೂ ಗೊತ್ತಾಗಲಿಲ್ಲ.

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






**ನಮ್ಮ ದೇವಾಲಯಗಳು :**

# ಅಮರನಾಥ್

ಒಂದು ದಿನ ಪಾರ್ವತೀದೇವಿ ಶಿವನನ್ನು ನೋಡಿ, "ಪರಮೇಶ್ವರಾ, ನೀವು ಆಗಾಗ ಕಪಾಲ ಹಾರವನ್ನು ಏಕೆ ಧರಿಸುವಿರಿ ?" ಎಂದು ಕೇಳಿದಳು. ಅದನ್ನು ಕೇಳಿ ಪರಮ ಶಿವನು ಸಣ್ಣಗೆ ನಕ್ಕು, "ಅದು ಪೂರ್ವಜನ್ಮದ ನಿನ್ನ ಕಪಾಲವೇ" ಎಂದನು. "ನೀವು ಸಾಯದಿರುವಾಗ ನಾನು ಮಾತ್ರ ಏಕೆ ಸತ್ತೆನು ?" ಎಂದಳು ಆಶ್ಚರ್ಯದಿಂದ ಪಾರ್ವತಿ.

ಪಾರ್ವತಿಗೆ ಜನನ ಮರಣಗಳ ರಹಸ್ಯವನ್ನು ಕುರಿತು ಹೇಳಬೇಕೆಂದು ಶಿವನು ಅಂದು ಕೊಂಡನು. ಅದಕ್ಕಾಗಿ ಕ್ರಿಮಿ ಕೀಟಕಗಳು ಕೂಡಾ ಇಲ್ಲದಿರುವ ರಹಸ್ಯ ಪ್ರದೇಶವು ಬೇಕಾಗಿತ್ತು. ಅಂತಹ ಸ್ಥಳವನ್ನು ಕಂಡು ಹಿಡಿಯಲು ರುದ್ರ ಗಣಗಳು ನಾಲ್ಕು ದಿಕ್ಕುಗಳಿಗೂ ಹೋಗಿ ಹುಡುಕ ತೊಡಗಿದರು.





ಕಡೆಗೆ ಅವರು ಹಿಮಾಲಯಗಳಲ್ಲಿರುವ ಒಂದು ಗುಹೆಯನ್ನು ಕಂಡುಹಿಡಿದರು. ಆ ಗುಹೆಯ ಪರಿಸರದಲ್ಲಿ ಒಂದೇ ಒಂದು ಪ್ರಾಣಿ ಕೂಡಾ ಕಾಣಲಿಲ್ಲ. ಶಿವಪಾರ್ವತಿಯರು ಆ ಕಣಿವೆಯೊಳಗೆ ಪ್ರವೇಶಿಸಿದರು. ಅಲ್ಲಿ ಶಿವನು ಪಾರ್ವತಿಗೆ ಜನನ ಮರಣಗಳ ರಹಸ್ಯವನ್ನು ವಿವರಿಸ ತೊಡಗಿದನು.



ಶಿವನ ಮಾತುಗಳನ್ನು ಕೇಳುತ್ತಿದ್ದ ಪಾರ್ವತಿಗೆ ಒಂದು ದಶೆಯಲ್ಲಿ ಹಾಗೆಯೇ ನಿದ್ದೆ ಬಂತು. ಆದರೂ ತನ್ನ ಮಾತುಗಳಿಗೆ ಯಾರೋ ಹೂಂಗುಟ್ಟುವುದನ್ನು ಗಮನಿಸಿದ ಶಿವನು ಆಶ್ಚರ್ಯಪಟ್ಟನು. ಪಾರ್ವತಿಯನ್ನು ತಟ್ಟಿ ಎಬ್ಬಿಸಿ ತನ್ನ ಮಾತುಗಳಿಗೆ ಹೂಂಗುಟ್ಟಿದ ಪ್ರಾಣಿಯನ್ನು ನಾಲ್ಕು ಸುತ್ತಲೂ ಹುಡುಕಿದನು.

ಶಿವಪಾರ್ವತಿಯರು ಕುಳಿತುಕೊಂಡಿದ್ದ ಬಂಡೆಯ ಕೆಳಗಿದ್ದ ಕನ್ನದೊಳಗಿನಿಂದ ಚಿಕ್ಕದೊಂದು ಗಿಣಿ ರಿವ್ವನೆ ಹೊರಗೆ ಬಂತು. ಆ ಕನ್ನದಲ್ಲಿ ಮೊಟ್ಟೆಯಾಗಿದ್ದು ಆಗ ತಾನೇ ಮೊಟ್ಟೆಯೊಡೆದು ಮರಿಯಾಗಿ ಮಾರ್ಪಟ್ಟ ಆ ಗಿಣಿ ಶಿವನು ಪಾರ್ವತಿಗೆ ಉಪದೇಶಿಸಿದ ರಹಸ್ಯವನ್ನೆಲ್ಲಾ ಕೇಳಿ ಹೊರಗೆ ಹಾರಿಹೋಯಿತು.





ತುಸು ದೂರದಲ್ಲಿದ್ದ ವ್ಯಾಸ ಮಹರ್ಷಿಯ ಕುಟೀರದ ಮುಂದೆ ಕುಳಿತುಕೊಂಡಿದ್ದ ವ್ಯಾಸನ ಪತ್ನಿ ತಲೆಬಾಚಿಕೊಳ್ಳುತ್ತಿರುವಾಗ, ಆ ಗಿಣಿ ಅಲ್ಲಿಗೆ ಹೋಗಿ ಅವಳಲ್ಲಿ ಲೀನವಾಗಿ ಹೋಯಿತು. ಮತ್ತೆ ಕೆಲವು ದಿನಗಳ ಮೇಲೆ ಆ ಗಿಣಿಯೇ ಅವಳ ಹೊಟ್ಟೆಯಲ್ಲಿ ಹುಟ್ಟಿ, ಶುಕನೆಂಬ ಮುನಿಪುಂಗವನಾಗಿ ಕೀರ್ತಿಗಳಿಸಿದನು.

ಶಿವನು ಪಾರ್ವತಿಗೆ ರಹಸ್ಯಗಳನ್ನು ತಿಳಿಯ ಪಡಿಸಿದ ಆ ಗುಹೆ ಪವಿತ್ರ ಸ್ಥಳವಾಯಿತು. ಕೆಲವು ಶತಮಾನಗಳು ಗತಿಸಿದುವು. ಒಂದು ದಿನ ಯುವಕನಾದ ಒಬ್ಬ ಕುರುಬನು ಮಂದೆಯಿಂದ ತಪ್ಪಿಸಿಕೊಂಡು ಹೋದ ಕುರಿ ಮರಿಯನ್ನು ಓಡಿಸುತ್ತಾ ಆ ಕಡೆಗೇ ಹೋದನು.






ಇದ್ದಕ್ಕಿದ್ದ ಹಾಗೆ ಅವನು ಆ ಗುಹೆಯಲ್ಲಿ ಲಿಂಗ ರೂಪವನ್ನು ನೋಡಿ ಆಶ್ಚರ್ಯ ಪಟ್ಟನು. ಮರುಕ್ಷಣವೇ ಅವನ ಮನಸ್ಸಿನಲ್ಲಿ ಅತ್ಯಂತ ಶಾಂತಿಯೂ, ಭಕ್ತಿಯೂ ಉಂಟಾದುವು. ಅವನು ಕಾಶ್ಮೀರ ರಾಜನ ಬಳಿಗೆ ಹೋಗಿ ಆ ವಿಷಯವನ್ನು ತಿಳಿಯಪಡಿಸಿದನು.

ಕಾಶ್ಮೀರ ರಾಜನು ಪರಿವಾರದೊಂದಿಗೆ ಆ ಸ್ಥಳಕ್ಕೆ ಬಂದನು. ಅಲ್ಲಿದ್ದ ಮುನಿಗಳು ರಾಜನಿಗೆ ಆ ಸ್ಥಳದ ಪವಿತ್ರತೆಯನ್ನು ಕುರಿತು ವಿವರವಾಗಿ ತಿಳಿಯಪಡಿಸಿ, ಅದನ್ನು ಹಾಗೆಯೇ ಪ್ರಕೃತಿ ರಕ್ಷಣೆಗೆ ಬಿಟ್ಟುಬಿಡುವಂತೆ ಹೇಳಿದರು.





ಪ್ರತಿವರ್ಷ ಆಗಸ್ಟ್ ತಿಂಗಳಿನಲ್ಲಿ ಅನೇಕ ಮಂದಿ ಯಾತ್ರಿಕರು ಈ ಗುಹೆಗೆ ನಲುವತ್ತಾರು ಕಿಲೋ ಮೀಟರ್ ದೂರದಲ್ಲಿರುವ ಪಹಾಲ್ಗಮ್ಮಿನ ಹತ್ತಿರ ಗುಂಪುಗೂಡುತ್ತಾರೆ. ಕಾಶ್ಮೀರದ ಧರ್ಮಾರ್ಥ ಸಂಘದ ಅಧಿಪತಿಯ ನಾಯಕತ್ವ ದಲ್ಲಿ ಭಕ್ತರು ಗುಹೆಯ ಕಡೆಗೆ ಯಾತ್ರೆ ಸಾಗಿಸುವರು.

ಅತ್ಯದ್ಭುತ ಸೌಂದರ್ಯ ನಿಲಯವಾದ ಬೆಟ್ಟಗಳ ಹಾಗು ಕಣಿವೆಗಳ ದಾರಿಯಲ್ಲಿ ತೊರೆಗಳನ್ನೂ, ತಟಾಕಗಳನ್ನೂ ದಾಟುತ್ತ ಭಕ್ತರು ನಾಲ್ಕೈದು ದಿನಗಳು ಪ್ರಯಾಣವಾಡಿ ಈ ಗುಹೆಯ ಸಮೀಪ ಸೇರಿಕೊಳ್ಳುತ್ತಾರೆ.





ಅಲ್ಲಿ ಪ್ರಕೃತಿ ಸಿದ್ಧವಾದ ಮಂಜಿನ ತುಂಡು ಗಳಿಂದ ರೂಪಿತವಾದ ದೊಡ್ಡ ಶಿವಲಿಂಗವನ್ನು ಭಕ್ತರು ಸಂದರ್ಶನ ಮಾಡುತ್ತಾರೆ. ಪ್ರಪ್ರಥಮ ದಲ್ಲಿ ಭೃಗು ಮಹರ್ಷಿ ಆ ಹಿಮಲಿಂಗವನ್ನು ದರ್ಶಿಸಿದನೆಂದು ಹೇಳುತ್ತಾರೆ. ಆ ದಿನದಿಂದ ತಲೆತಲಾಂತರವಾಗಿ ಸಾವಿರಾರು ಮಂದಿ ಭಕ್ತರು ಪವಿತ್ರವಾದ ಈ ಅಮರನಾಥ್ ಕ್ಷೇತ್ರವನ್ನು ಸಂದರ್ಶನ ಮಾಡುತ್ತಿದ್ದಾರೆ.



ಹೀಗಿರಲು ಪವಿತ್ರವಾದ ಸಮುದ್ರ ಜಲದಲ್ಲಿ ಸ್ನಾನಮಾಡಿ ಶಿವನನ್ನು ಪ್ರಾರ್ಥಿಸಿಕೊಂಡಿರಬೇಕೆಂದು ಚಂದ್ರನಿಗೆ ದೇವತೆಗಳು ಸಲಹೆ ಮಾಡಿದರು. ಚಂದ್ರನು ಹಾಗೆಯೇ ಮಾಡಿದುದರಿಂದ ಕಳೆದುಕೊಂಡ ಪ್ರಕಾಶವನ್ನು ಮತ್ತೆ ಪಡೆದನು. ಚಂದ್ರನು ಸ್ನಾನಮಾಡಿದ ಆ ಸ್ಥಳಕ್ಕೆ ಪ್ರಭಾಸ ಕ್ಷೇತ್ರವೆಂದು ಹೆಸರು ಬಂತು.

ಚಂದ್ರನು ಸ್ವಲ್ಪಕಾಲ ಪ್ರಭಾಸ ಕ್ಷೇತ್ರದಲ್ಲಿ ಶಿವನನ್ನು ಪೂಜಿಸಿದುದರಿಂದ, ಕ್ರಮವಾಗಿ ಜನರು ಅಲ್ಲಿಯ ಶಿವನನ್ನು ಸೋಮನಾಥನೆಂಬ ಹೆಸರಿನಲ್ಲಿ ಪೂಜಿಸಲು ಪ್ರಾರಂಭಿಸಿದರು.





ಪ್ರಭಾಸ ಕ್ಷೇತ್ರದಲ್ಲಿ ಮೊತ್ತಮೊದಲು ಯಾವಾಗ ಶಿವಾಲಯವು ನಿರ್ಮಿಸಲ್ಪಟ್ಟಿತೆಂಬುದು ನಮಗೆ ತಿಳಿಯದು. ಕ್ರಿ. ಶ. ೬–೭ನೆಯ ಶತಮಾನಗಳಲ್ಲಿ ಆ ಪ್ರಾಂತವನ್ನು ಪರಿಪಾಲಿಸಿಕೊಂಡಿದ್ದ ನಾಲ್ಕನೆಯ ಧಾರಾಸೇನನ ಕಾಲದಲ್ಲಿ ಆ ಗುಡಿ ಶಿಥಿಲಾವಸ್ಥೆಯಲ್ಲಿದ್ದುದರಿಂದ ಆ ರಾಜನು ಅಲ್ಲಿ ನೂತನ ಆಲಯವನ್ನು ಕಟ್ಟಿಸಿದನು.

೯ನೆಯ ಶತಮಾನದಲ್ಲಿ ಆ ಶಿವಾಲಯದ ಪುನರ್ನಿರ್ಮಾಣವಾಯಿತು. ಆಗಿನಿಂದ ಅದು ಸುಪ್ರಸಿದ್ಧ ಯಾತ್ರಾಸ್ಥಳವಾಗಿ, ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಸಂದರ್ಶನಮಾಡ ತೊಡಗಿದರು. ರಾಜರೂ, ಸಾಮಾನ್ಯ ಜನರೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಬಂಗಾರದ ಆಭರಣಗಳನ್ನು ಆಲಯಕ್ಕೆ ಸಮರ್ಪಿಸುತ್ತ ಬಂದರು. ಆಲಯದ ಸುತ್ತುಮುತ್ತಲೂ, ಅಂಗಡಿಗಳೂ ವಸತಿ. ಗೃಹಗಳೂ ಏರ್ಪಟ್ಟವು.





ಹನ್ನೊಂದನೇ ಶತಮಾನದಲ್ಲಿ ಗಜನೀ ಮಹಮ್ಮದ್ ಭಾರತ ದೇಶದ ಮೇಲೆ ದಂಡಯಾತ್ರೆ ಮಾಡಿದನು. ಸೋಮನಾಥ ದೇವಾಲಯದಲ್ಲಿರುವ ರತ್ನರಾಶಿಗಳನ್ನು ಕುರಿತು ಕೇಳಿದ್ದ ಮಹಮ್ಮದ್, ಅದನ್ನು ಮುತ್ತಲು ತನ್ನ ಸೈನ್ಯವನ್ನು ಆಲಯದ ಕಡೆಗೆ ನಡೆಸಿದನು. ಇದು ಅಲ್ಲಿಯ ಪೌರರಿಗೆ ಗೊತ್ತಾಯಿತು.

ಆಲಯದ ರಕ್ಷಣೆಗಾಗಿ ಆ ಪ್ರಾಂತದ ಪಾಲಕನು ತನ್ನ ಸೈನಿಕರನ್ನು ಕಳುಹಿಸಿಕೊಟ್ಟನು. ಆದರೂ ಅಸಂಖ್ಯಾಕರಾದ ಗಜನೀ ಮಹಮ್ಮದನ ಸೈನ್ಯವನ್ನು ಬಹಳ ಹೊತ್ತು ತಡೆಯಲಾಗಲಿಲ್ಲ. ಸಾಮಾನ್ಯ ಪೌರರು ಕೂಡಾ ದುರಾಕ್ರಮಣ ದಾರರೊಂದಿಗೆ ಹೋರಾಡಿ ಪ್ರಾಣ ಕಳೆದು ಕೊಂಡರು.





ದೇವಾಲಯದೊಳಗಿನ ಸ್ವರ್ಣಾಭರಣಗಳನ್ನು, ರತ್ನಗಳನ್ನು ತೆಗೆದುಕೊಂಡು ಮೂಲ ವಿಗ್ರಹವನ್ನು ಬಿಟ್ಟುಬಿಡುವಂತೆ ಪೂಜಾರಿಗಳೂ ಭಕ್ತರೂ ದುರಾಕ್ರಮಣದಾರರೊಂದಿಗೆ ಪ್ರಾರ್ಥಿಸಿದರು. ಆದರೂ ಗಜನೀ ಮಹಮ್ಮದನ ಸೈನಿಕರು ಅವರ ಮಾತನ್ನು ಅಲಕ್ಷ್ಯಮಾಡಿ ನಿರಾಯುಧರಾದ ಅವರೆಲ್ಲರನ್ನೂ ನಿರ್ದಾಕ್ಷಿಣ್ಯವಾಗಿ ಕೊಂದುಬಿಟ್ಟರು.

ಐವತ್ತು ಸಾವಿರ ಮಂದಿಗಳನ್ನು ಕೊಂದ ಮೇಲೆಯೇ ಮಹಮ್ಮದನ ಸೈನಿಕರಿಗೆ ಆಲಯದೊಳಗೆ ಪ್ರವೇಶಿಸಲು ಸಾಧ್ಯವಾಯಿತು. ಅವರು ಆಲಯವನ್ನೂ, ಆಲಯದೊಳಗಿನ ವಿಗ್ರಹವನ್ನೂ ನಾಶಮಾಡಿ, ದೇವಾಲಯದೊಳಗಿನಿಂದ ತಾವು ಅಂದುಕೊಂಡುದಕ್ಕಿಂತಲೂ ಹೆಚ್ಚಿಗೆ ಧನರಾಶಿಗಳನ್ನು ಕೊಳ್ಳೆ ಹೊಡೆದುಕೊಂಡು ಹೋದರು.







ಆ ಮುತ್ತಿಗೆಯ ಮೇಲೆ ನಿರ್ಮಿಸಲ್ಪಟ್ಟ ಆಲಯವು ಹದಿಮೂರನೇ ಶತಮಾನದಲ್ಲಿ ಅಲ್ಲಾ ಉದ್ದೀನ್ ಖಿಲ್ಜಿಯಿಂದ ನಾಶವಾಯಿತು. ಆ ಮೇಲೆ ನಿರ್ಮಿಸಲ್ಪಟ್ಟ ದೇವಾಲಯವು ಹದಿನೆಂಟನೆಯ ಶತಮಾನದಲ್ಲಿ ಔರಂಗಜೇಬನ ಆಣತಿಯಂತೆ ನೆಲಮಟ್ಟ ಮಾಡಲ್ಪಟ್ಟಿತು. ಆದಾದನಂತರ ಇಂದೋರ್ ರಾಣಿ ಅಹಲ್ಯಾಬಾಯಿ ಮತ್ತೆ ಅದನ್ನು ನಿರ್ಮಿಸಿದಳು. ಇತ್ತೀಚೆಗೆ ನಿರ್ಮಿಸಲಾದ ಹೊಸ ಆಲಯಕ್ಕೆ ೧೯೫೧ ನೇ ಸಂವತ್ಸರದಲ್ಲಿ ಪ್ರಾರಂಭೋತ್ಸವ ನಡೆಯಿತು.



# ಆಸ್ಥಾನ ತಿಂಡಿಬಾಕ

ಒಂದು ಕಾಲದಲ್ಲಿ ರಂಗಪುರದಲ್ಲಿ ಚಿಂತಾಲಕ ನೆಂಬೊಬ್ಬನು ಪರಮ ಸೋಮಾರಿಯಾಗಿದ್ದನು. ಆ ಕಾರಣದಿಂದ ಅವನು ಕೆಲಮಂದಿ ಸರಳ ಗುಣವುಳ್ಳವರ ಹತ್ತಿರ ಸೇರಿ, ತಾನು ಬಹಳ ದೊಡ್ಡವನೆಂಬ ಹಾಗೆ ಜಂಬದ ಮಾತುಗಳನ್ನು ಹೇಳುವನು. ಅಂತಹುದರಲ್ಲಿ ಬಲುಗಟ್ಟಿಗ.

ಒಂದುಸಾರಿ ಆ ಸರಳ ಮನುಷ್ಯರಲ್ಲಿ ಒಬ್ಬನು, "ಅದೇನು ನಿನ್ನ ದೊಡ್ಡತನ ? ಯಾವಾಗಲೂ ಯಾವ ಮರದ ಕೆಳಗೋ ಉಗುರು ಕೆರೆದುಕೊಳ್ಳುತ್ತಾ ಕುಳಿತುಕೊಳ್ಳುವುದು ತಾನೇ ನಿನ್ನ ಕೆಲಸ ? " ಎಂದು ಹೇಳಿದನು.

"ನೀನು ದಿನವಿಡೀ ಕಷ್ಟಪಟ್ಟು ಕೆಲಸಮಾಡುವಿ ಹೌದಾ ? ಒಂದೇಸಾರಿ ನಿನ್ನಿಂದ ಎಷ್ಟು ಪೇರಂಗಾಯಿಗಳನ್ನು ತಿನ್ನಲು ಸಾಧ್ಯ ಹೇಳು" ಎಂದು ಚಿಂತಾಲಕನು ಅವನನ್ನು ಕೇಳಿದನು.

ಸರಳ ಮನುಷ್ಯ ಸ್ವಲ್ಪಹೊತ್ತು ಆಲೋಚನೆ ಮಾಡಿ "ಹದಿನೈದು" ಎಂದನು.

"ನಾನು ನಲುವತ್ತು ತಿನ್ನುತ್ತೇನೆ. ಗೊತ್ತೇನು ? " ಎಂದನು ಚಿಂತಾಲಕ.

ಸರಳ ಗುಣದವನು ಆಶ್ಚರ್ಯಪಡುತ್ತಾ, "ತಿನ್ನು ನೋಡೋಣ" ಎಂದನು. "ತಂದುಕೊಟ್ಟರೆ ಹೇಳಿದ ಹಾಗೆಯೇ ತಿಂದುಬಿಡುತ್ತೇನೆ" ಎಂದನು ಚಿಂತಾಲಕ.

ಸರಳ ಗುಣದವನು ತನ್ನ ಸ್ನೇಹಿತರನ್ನು ಕರೆದುಕೊಂಡು ಹೋಗಿ ನಲುವತ್ತು ಪೇರಂಗಾಯಿಗಳನ್ನು ತೆಗೆದುಕೊಂಡು ಬಂದು ಚಿಂತಾಲಕನ ಮುಂದಿಟ್ಟನು. ಚಿಂತಾಲಕನ ಜಡಹೊಟ್ಟೆಯ ಶಕ್ತಿ ದೊಡ್ಡದೇ. ಅವನು ಒಂದರ ಮೇಲೊಂದಾಗಿ ನಲುವತ್ತು ಪೇರಂಗಾಯಿಗಳನ್ನೂ ಕರಕರನೆ ತಿಂದುಬಿಟ್ಟನು.

ಸರಳ ಗುಣದವನು ಚಿಂತಾಲಕನನ್ನು ಕರುಣೆಯಿಂದ ನೋಡುತ್ತಾ, "ಪಾಪ ! ನಿನಗೆ ಇಷ್ಟು ದೊಡ್ಡ ತಿಂಡಿಯ ಶಕ್ತಿ ಇದ್ದರೆ ಬಹಳ ಕಷ್ಟ. ಕಷ್ಟಪಟ್ಟು ಯಾವ ಕೆಲಸವನ್ನೂ ನೀನು ಮಾಡುವುದಿಲ್ಲ. ತಿನ್ನಲು ಹೇಗೆ ಸಿಗುತ್ತೆ ? " ಎಂದನು.

"ಕಷ್ಟಪಟ್ಟು ಕೆಲಸ ಮಾಡದಿರುವಾಗಲೇ ಇಷ್ಟು ತಿನ್ನುತ್ತೇನಪ್ಪ ? ಕಷ್ಟಪಟ್ಟರೆ ನನ್ನ ಹಸಿವೆ ಇನ್ನೂ ಹೆಚ್ಚಾಗಿ ಹೋಗುವುದಿಲ್ಲವೆ ? ಅದಕ್ಕೇ ನಾನು



ಕಷ್ಟಪಟ್ಟು ಕೆಲಸಮಾಡುವ ಗೋಜಿಗೆ ಹೋಗುವುದಿಲ್ಲ" ಎಂದನು ಚಿಂತಾಲಕ.

"ಹೌದೌದು. ಅದು ನಿಜವೇ, ಪಾಪ!" ಎಂದು ಕನಿಕರಪಟ್ಟನು ಸರಳ ಗುಣದವನು.

"ನಿಜ ಹೇಳುವುದಾದರೆ ನನ್ನಂಥವನನ್ನು ಕೆಲಸ ಮಾಡ ಹೇಳುವುದು ಅನ್ಯಾಯ. ನಾನು ತಿನ್ನುವ ಸ್ಪರ್ಧೆಯಲ್ಲಿ ಗೆದ್ದು ನಮ್ಮ ಗ್ರಾಮಕ್ಕೆ ಹೆಸರು ತರುತ್ತೇನೆ. ಇದರ ಅಭ್ಯಾಸಕ್ಕಾಗಿ ದಿನಾ ನನಗೆ ತಿಂಡಿ ಕೊಟ್ಟು ಪೋಷಿಸಿದರೆ ಸಾಕು. ಸ್ಪರ್ಧೆಯಲ್ಲಿ ಗೆದ್ದುಬಿಡುತ್ತೇನೆ" ಎಂದನು ಚಿಂತಾಲಕ.

ಅವನು ಸ್ಪರ್ಧೆಯ ಮಾತು ಏಕೆ ಹೇಳಿದನೆಂದರೆ, ಪ್ರತಿ ವರ್ಷವೂ ನೆರೆಯ ಊರಿನ ಜಮೀನ್ದಾರರು ತಿಂಡಿಬಾಕರನ್ನು ಕೂಡಿಸಿ ಸ್ಪರ್ಧೆ ನಡೆಸುತ್ತಾರೆ. ಅದರಲ್ಲಿ ಗೆದ್ದವನನ್ನು ಒಂದು ವರ್ಷದ ವರೆಗೆ ಅವರೇ ಪೋಷಿಸುತ್ತಾರೆ. ಹಾಗೆ ಸ್ಪರ್ಧೆಯಲ್ಲಿ ಗೆದ್ದು ಜಮೀನ್ದಾರರ ಆಸ್ಥಾನ ತಿಂಡಿಬಾಕನಾಗಿರಬೇಕೆಂದು ಚಿಂತಾಲಕನು ಕನಸು ಕಾಣುತ್ತಿದ್ದನು. ಪ್ರತಿವರ್ಷವೂ ತಾನೇ ಗೆದ್ದರೆ ಹೊಟ್ಟೆಯ ಚಿಂತೆ ತೀರಿದಂತೆ ತಾನೇ!

ಚಿಂತಾಲಕನು ಹೇಳಿದುದನ್ನು ಕೇಳಿ, ಸರಳ ಗುಣದವನು ಗ್ರಾಮಾಧಿಕಾರಿಯ ಬಳಿಗೆ ಹೋಗಿ, ಚಿಂತಾಲಕನ ಸಂಗತಿಯನ್ನು ಹೇಳಿ, "ಅವನ ತಿಂಡಿಬಾಕತನ ದೊಡ್ಡದು. ಸ್ವಲ್ಪಕಾಲ ವರೆಗೆ ನಾವೆಲ್ಲಾ ಕೂಡಿ ಪೋಷಿಸಿಬಿಟ್ಟರೆ ಅವನು ನಮ್ಮ ಗ್ರಾಮಕ್ಕೆ ದೊಡ್ಡ ಹೆಸರು ತರುತ್ತಾನೆ" ಎಂದನು.

ಗ್ರಾಮಾಧಿಕಾರಿಗೆ ಚಿಂತಾಲಕನ ಪಥಕವು ಅರ್ಥವಾಯಿತು. ಅವನಿಗೆ ಹೇಗಾದರೂ ಬುದ್ಧಿ ಕಲಿಸಬೇಕೆಂದುಕೊಂಡು ಆಲೋಚನೆ ಮಾಡಿದನು. ಹಿಂದೊಮ್ಮೆ ಜಮೀನ್ದಾರರ ಹತ್ತಿರ ಸ್ಪರ್ಧೆಯಲ್ಲಿ ಗೆದ್ದು ಆಸ್ಥಾನ ತಿಂಡಿಬಾಕನಾಗಿದ್ದ ಸುಪುಷ್ಟಿ ಎಂಬವನು ಆ ಗ್ರಾಮಾಧಿಕಾರಿಯ ಪರಿಚಿತನಾಗಿದ್ದನು.

ಗ್ರಾಮಾಧಿಕಾರಿ ಸುಪುಷ್ಟಿಯನ್ನು ತನ್ನ ಬಳಿಗೆ ಕರೆಯಿಸಿ, ಆಮೇಲೆ ಚಿಂತಾಲಕನನ್ನು ಕರೆಯಿಸಿ, "ಚಿಂತಾಲಕಾ, ನಿನಗೆ ಜಮೀನ್ದಾರರ ತಿಂಡಿಬಾಕ ಸ್ಪರ್ಧೆಯಲ್ಲಿ ಭಾಗವಹಿಸಬೇಕೆಂದು ಆಸೆಯಾಗಿದೆಯಂತೆ; ನಿಜವೇ ಆದರೆ ನಾವೆಲ್ಲಾ ಕೂಡಿ ನಿನ್ನನ್ನು ತಯಾರು ಮಾಡಬೇಕೆಂದಿದ್ದೇವೆ. ಆದರೆ ನಿನ್ನ ಸಾಮರ್ಥ್ಯವೆಷ್ಟೆಂದು ಮೊದಲು ಪರೀಕ್ಷೆ ಮಾಡಬೇಕಷ್ಟೆ? ಇಕೋ, ಈ ಸುಪುಷ್ಟಿ ಎರಡು ವರ್ಷಗಳ ಕೆಳಗೆ ಅಲ್ಲಿಯ ತಿಂಡಿಬಾಕ ಸ್ಪರ್ಧೆಯಲ್ಲಿ ಗೆದ್ದು ಒಂದು ವರ್ಷ ಜಮೀನ್ದಾರರ ಪೋಷಣೆಯಲ್ಲಿದ್ದವನು. ನೀನು ಇವನನ್ನು ತಿಂಡಿ ತಿನ್ನುವುದರಲ್ಲಿ ಸೋಲಿಸಿದಿಯಾದರೆ ನಮ್ಮ ಗ್ರಾಮದವರು ನಿನ್ನನ್ನು ತಿಂಡಿಬಾಕ ಸ್ಪರ್ಧೆಗೆ ತಯಾರು ಮಾಡುತ್ತಾರೆ. ಏನನ್ನುವಿ?" ಎಂದು ಕೇಳಿದನು.

ಚಿಂತಾಲಕನು ಸ್ಪರ್ಧೆಗೆ ಸಿದ್ಧನಾದನು. ಅವನನ್ನು



ನೋಡಿ ಸುಪುಷ್ಟಿ "ನೀನು ಸೊರಕಲು ಪ್ರಾಣಿಯು ಹಾಗಿರುವಿ. ನನ್ನೊಂದಿಗೆ ಸ್ಪರ್ಧಿಸುವ ತ್ರಾಣ ನಿನಗೆ ಇರಲಿಕ್ಕಿಲ್ಲ" ಎಂದನು.

"ನಾನು ಒಂದೇಸಾರಿ ನಲುವತ್ತು ಪೇರಂಗಾಯಿಗಳನ್ನು ತಿಂದಿದ್ದೇನೆ. ನನ್ನ ಸಂಗತಿ ನಿನಗೆ ತಿಳಿಯದು" ಎಂದನು ಚಿಂತಾಲಕ ಕೋಪದಿಂದ.

"ಹಾಗಾದರೆ ಸರಿ. ನಾಳೆ ನಿನಗೂ ನನಗೂ ಗಾರಿಗೆಯ ಸ್ಪರ್ಧೆ. ನೀನು ಎಷ್ಟು ತಿನ್ನುವಿಯೋ ಅದಕ್ಕಿಂತ ಹತ್ತು ಹೆಚ್ಚಿಗೆ ನಾನು ತಿನ್ನುತ್ತೇನೆ" ಎಂದನು ಸುಪುಷ್ಟಿ.

ಮರುದಿನ ಆ ಸ್ಪರ್ಧೆಯ ಸನ್ನಾಹವಾಯಿತು. ಮೊದಲು ಚಿಂತಾಲಕನು ತಿನ್ನಲು ಪ್ರಾರಂಭಿಸಿ ಇನ್ನೂರು ಗಾರಿಗೆಗಳನ್ನು ತಿಂದನು. ನೋಡಿದವರೆಲ್ಲ ಅವನ ತಿಂಡಿಯ ಶಕ್ತಿಗೆ ಆಶ್ಚರ್ಯಪಟ್ಟರು. ಆಮೇಲೆ ಸುಪುಷ್ಟಿ ಗಾರಿಗೆಗಳನ್ನು ತಿನ್ನಲು ಪ್ರಾರಂಭಿಸಿದನು. ಅವನು ಅವಲೀಲೆಯಿಂದ ನೂರ ಎಂಬತ್ತು ಗಾರಿಗೆಗಳನ್ನು ತಿನ್ನುವಷ್ಟರಲ್ಲಿ ಚಿಂತಾಲಕನು ಹೆದರಿದನು. ಆಗ ಅವನು ಅಡಿಗೆಯವನನ್ನು ನೋಡಿ ಗಾರಿಗೆಗಳನ್ನು ದೊಡ್ಡದಾಗಿ ಅರಿಸಿಕೊಡು ವಂತೆ ಸನ್ನೆಮಾಡಿದನು.

ಚಿಂತಾಲಕನೇ ದೊಡ್ಡ ಗಾರಿಗೆಗಳನ್ನು ಸುಪುಷ್ಟಿಗೆ ಎತ್ತಿ ಕೊಡಲು, ಸುಪುಷ್ಟಿ ಮತ್ತೆ ಹತ್ತುಗಾರಿಗೆಗಳನ್ನು ಅನಾಯಾಸವಾಗಿ ತಿಂದನು. ಚಿಂತಾಲಕನು ಮತ್ತಷ್ಟು ಹೆದರಿ, ಸುಪುಷ್ಟಿ ತಿನ್ನುವ ಗಾರಿಗೆಗಳ ಲೆಕ್ಕವನ್ನು ತಪ್ಪಾಗಿ ಹೇಳಲು ತೊಡಗಿದನು. ಅದಕ್ಕೆ ಅವನ ಸುತ್ತಲೂ ಸೇರಿದ ಸರಳ ಗುಣದವರ ಗುಂಪೂ ಸಹಾಯಮಾಡಿತು.

ಅದರಿಂದಾಗಿ ಸುಪುಷ್ಟಿ ತಿನ್ನುವ ಗಾರಿಗೆಗಳ ಸಂಖ್ಯೆ ಇನ್ನೂರಾಗಲು ಬಹಳ ಹೊತ್ತು ಹಿಡಿಯಿತು. ತನಗೆ ಅಪಜಯವು ತಪ್ಪದೆಂದು ಚಿಂತಾಲಕನಿಗೆ ತಿಳಿಯಿತು.

ಆದರೂ ತನ್ನ ದುಗುಡವನ್ನು ತೋರಿಸಿಕೊಳ್ಳದೆ "ನೀನು ಇನ್ನೂ ಹತ್ತುಗಾರಿಗೆ ತಿಂದರೆ ಪಂಥದಲ್ಲಿ ಗೆಲ್ಲುವಿ" ಎಂದನು ಸುಪುಷ್ಟಿಯನ್ನು ನೋಡಿ.

ಅದಕ್ಕೆ ಸುಪುಷ್ಟಿ ಒಪ್ಪಿದನು. ಚಿಂತಾಲಕನು ಮತ್ತೆ ಹತ್ತು ಗಾರಿಗೆಗಳನ್ನು ತಿನ್ನಿಸಿದ ಮೇಲೆಯೇ ಅವನು ಹೇಳಿದಂತೆ ಮಾಡಿದುದನ್ನು ಒಪ್ಪಿದನು.

"ಹಾಗಾದರೆ ನಾನು ಈ ಸ್ಪರ್ಧೆಯಲ್ಲಿ ಗೆದ್ದೆನೆಂದು ಒಪ್ಪಿಕೊಳ್ಳುವಿಯಾ?" ಎಂದನು ಸುಪುಷ್ಟಿ.

"ಎಲ್ಲರೂ ನೋಡಿದ್ದಾರಷ್ಟೆ? ಇನ್ನು ನಾನು ಒಪ್ಪಿಕೊಳ್ಳುವುದೇನಿದೆ?" ಎಂದನು ಚಿಂತಾಲಕನು ದಿಗಿಲಿನಿಂದ.

"ಅದೇನಿಲ್ಲಾಣ್ಣ. ಈ ಪಂಥದ ಗೊಡವೆ ಮುಗಿದುಹೋದರೆ, ಸಾವಧಾನವಾಗಿ ಕುಳಿತು ಇನ್ನೊಂದು ನೂರುಗಾರಿಗೆ ತಿನ್ನಬಹುದು ಅಂತ ನನ್ನ ಆಸೆ. ಅಷ್ಟೇ!" ಎಂದನು ಸುಪುಷ್ಟಿ. ಚಿಂತಾಲಕನು ಸುಪುಷ್ಟಿಯ ತಿಂಡಿಬಾಕತನಕ್ಕೆ

ಆಶ್ಚರ್ಯಪಟ್ಟು, "ಹಾಗೆ ಮಾಡಬೇಕಂದರೆ ಏನು ಮಾಡಬೇಕೆಂಬ ಆ ಉಪಾಯ ಸ್ವಲ್ಪ ನನಗೂ ಹೇಳಿ ಬಿಡಯ್ಯ" ಎಂದು ಕೇಳಿಕೊಂಡನು.

"ನನ್ನ ಹಸಿವೆಗೆ ತಕ್ಕಹಾಗೆ ನಾನು ತಿನ್ನುತ್ತೇನೆ. ಅಷ್ಟೇ. ಇದರಲ್ಲಿ ಉಪಾಯ ಗಿಪಾಯ ಏನೂ ಇಲ್ಲ. ಇದ್ದರೂ ಹೇಳಲಾರೆನು. ಏಕೆಂದರೆ ಇಷ್ಟು ತಿಂಡಿ ತಿನ್ನುವವನಿಗೆ ಮಿದುಳೇ ಕೆಲಸಮಾಡದು. ಮಿದುಳು ಸರಿಯಾಗಿದ್ದರೆ ಮಾತ್ರ ಉಪಾಯ ಏನಾದರೂ ಹೊಳೆದೀತು. ಅದೇ ನಿಶ್ಚೇಷ್ಟಿತವಾದರೆ ಉಪಾಯ ಹೇಗೆ ಹೊಳೆಯುತ್ತೆ ?" ಎಂದನು ಸುಪುಷ್ಟಿ.

"ಹಾಗಾದರೆ ನೀನು ನನಗೇನೂ ಸಹಾಯ ಮಾಡಲಾರೆಯಾ ?" ಎಂದು ಕೇಳಿದ ಚಿಂತಾಲಕ.

"ನಾನು ನಿನಗೆ ಒಂದೇ ಒಂದು ಸಲಹೆ ಮಾತ್ರ ಮಾಡಬಲ್ಲೆ. ನಿನ್ನ ಹಸಿವೆಯನ್ನು ತಗ್ಗಿಸಿಕೊಳ್ಳುವ ಉಪಾಯ ನೋಡಿಕೋ. ದಿನಾ ನಿನಗೆ ಇನ್ನೂರು ಗಾರಿಗೆ ಕೊಡುವವರು ಯಾರೂ ಇರಲಿಕ್ಕಿಲ್ಲ" ಎಂದನು ಸುಪುಷ್ಟಿ.

ಚೆನ್ನಾಗಿದೆ ನಿನ್ನ ಸಲಹೆ. ಆದರೆ ಮುಖ್ಯ ವಾಗಿ ಹಸಿವೆ ತಗ್ಗುವುದು ಹೇಗೆ ಎಂಬುದನ್ನೂ ಇಷ್ಟು ವಿವರಿಸಿ ಹೇಳಿಬಿಡು" ಎಂದನು ಚಿಂತಾಲಕ.

"ಸೋಮಾರಿಯಾಗಿರುವವನಿಗೆ ತಿಂಡಿಗಳದೇ ಯೋಚನೆಯಾದುದರಿಂದ ಹಸಿವೆ ಜಾಸ್ತಿ. ದಿನಾ ಕಷ್ಟಪಟ್ಟು ಕೆಲಸಮಾಡುತ್ತಿದ್ದರೆ ತಿಂಡಿಗಳ ಆಸೆ ತಗ್ಗುತ್ತದೆ. ತಿಂದ ಸ್ವಲ್ಪ ತಿಂಡಿಗಳೂ ಶರೀರಕ್ಕೆ ಹಿಡಿಸುತ್ತವೆ. ನಾನು ದಿನಾ ಕಷ್ಟಪಟ್ಟು ಕೆಲಸ ಮಾಡುತ್ತೇನೆ. ಕೆಲವು ದಿನ ಕೆಲಸ ಮಾಡುವುದನ್ನು ಬಿಟ್ಟೆನೆಂದರೆ ನನ್ನ ಹಸಿವೆಗೆ ಎಲ್ಲೆಯೇ ಇರುವುದಿಲ್ಲ" ಎಂದನು ಸುಪುಷ್ಟಿ.

"ನೀನು ಕಷ್ಟಪಟ್ಟು ಕೆಲಸ ಮಾಡುವೆಯೇನು?" ಎಂದು ಕೇಳಿದನು ಚಿಂತಾಲಕ.

"ಹೌದು. ಈಗ ಮೂರು ದಿನಗಳಿಂದ ಯಾವ ಕೆಲಸವೂ ಸಿಗಲಿಲ್ಲ. ಯಾರಾದರೂ ತಿಂಡಿಯ ಸ್ಪರ್ಧೆಗೆ ಕರೆದರೆ ಕೆಲಸವೇನೂ ಮಾಡದೆ ಹಸಿವ ಹೆಚ್ಚಿಸಿಕೊಂಡು ಹೋಗಿ ಆ ಕೆಲಸದಲ್ಲಿ ಗೆದ್ದು ಬಿಡುತ್ತೇನೆ" ಎಂದನು ಸುಪುಷ್ಟಿ.

ಸೋಮಾರಿಗೆ ಸುಖವೆಂಬುದಿಲ್ಲವೆಂದು ಚಿಂತಾಲಕ ನಿಗೆ ತಿಳಿಯಿತು. ಸುಮ್ಮನೆ ಇರುವಾಗ ತಿಂಡಿಗಳದೇ ಆಲೋಚನೆ ಎಂಬುದು ಅವನ ಸ್ವಾನುಭವದಿಂದ ನಿಜವೆನಿಸಿತು. ಕೆಲಸ ಮಾಡಿಕೊಂಡಿದ್ದರೆ ದೇಹ ಶಕ್ತಿಗೆ ಬೇಕಾದಷ್ಟೇ ಹಸಿವೆಯಾಗುತ್ತದೆಂದೂ, ಸುಮ್ಮನಿದ್ದರೇನೇ ವಿಪರೀತ ಹಸಿವೆಯಾಗುವು ದೆಂದೂ ಅರಿತನು. ಅಂದಿನಿಂದ ಕಷ್ಟಪಟ್ಟು ಕೆಲಸ ಮಾಡಲಿಕ್ಕೂ ಅಭ್ಯಾಸ ಮಾಡಿದನು.





# ತೆಪ್ಪಕ್ಕೆ ದಿಮ್ಮಿ

ಪಶ್ಚಿಮ ಸಮುದ್ರತೀರದ ಗುಡ್ಡಗಾಡು ಪ್ರಾಂತವಾದ ಬದಿರಿ ಎಂಬ ಗ್ರಾಮದಲ್ಲಿ ಡುಂಬನೆಂಬ ಹಳ್ಳಿಯುವನೊಬ್ಬನಿದ್ದನು. ಅವನು ದಿನಾ ತನ್ನ ತೆಪ್ಪದ ಮೇಲೆ ಸಮುದ್ರಕ್ಕೆ ಹೋಗಿ ಮೀನು ಹಿಡಿದು, ಅದರ ಮಾರಾಟದಲ್ಲಿ ಬರುವ ಹಣದಿಂದ ಜೀವಿಸಿಕೊಂಡಿದ್ದನು.

ಹೀಗಿರುವಾಗ ಒಂದು ದಿನ ಡುಂಬನ ತೆಪ್ಪವು ಒಡೆದು ಹೋಗಿಬಿಟ್ಟಿತು. ಇನ್ನೊಂದು ಮರದ ತೆಪ್ಪ ತಯಾರಿಸಿಕೊಳ್ಳೋಣವೆಂದುಕೊಂಡು, ಅದಕ್ಕೆ ಬೇಕಾದ ಮರದ ದಿಮ್ಮಿಗಳಿಗಾಗಿ ಹುಡುಕುತ್ತಾ, ಒಂದು ದಿನ ಸಾಯಂಕಾಲ ಗುಡ್ಡಗಳ ಕಡೆಗೆ ಹೊರಟನು. ಎಷ್ಟು ದೂರ ಅಲೆದಾಡಿದರೂ ತೆಪ್ಪಕ್ಕೆ ಉಪಯೋಗವಾಗುವ ಮರವು ಕಾಣಲೇ ಇಲ್ಲ. ಅಷ್ಟು ಹೊತ್ತಿಗೆ ಆಕಾಶದಲ್ಲಿ ಕಾರ್ಮೋಡಗಳು ದಟ್ಟವಾಗಿ ಕವಿದು ಕತ್ತಲೆ ಹೆಚ್ಚಿತು. ಅವನು ಆ ಅಪರಿಚಿತ ಪ್ರಾಂತವನ್ನು ಬಿಟ್ಟು ಮನೆಯ ಕಡೆಗೆ ಹೋಗಬೇಕೆಂದುಕೊಂಡು ಹಿಂದಿರುಗಿದನು.

ಕತ್ತಲೆಯಾದುದರಿಂದ ಡುಂಬನಿಗೆ ಎಲ್ಲೋ ದಿಕ್ಕು ತಪ್ಪಿ ದಾರಿಯಾವುದೋ ಬೇರೆಯಾಗಿರಬೇಕು. ಎಷ್ಟು ಹೊತ್ತು ನಡೆದರೂ ಗುಡ್ಡಗಳೇ ಹೊರತು ಸಮುದ್ರವು ಇದಿರಾಗಲೇ ಇಲ್ಲ. ಮಳೆಯೂ ಬೀಳತೊಡಗಿತು. "ಮಳೆಗೆ ನೆನೆಯುತ್ತಾ ಹಸಿವೆಯಿಂದ ಸಂಕಟಪಡುತ್ತಾ, ಬೆಳಗವರೆಗೂ ಈ ಗುಡ್ಡಗಳ ಮೇಲೆ ಇರಬೇಕೇನೋ !" ಎಂದು ಅವನು ಚಿಂತಿಸಿಕೊಂಡಿರುವಾಗ ಅಷ್ಟು ದೂರದಲ್ಲಿ ಮಿಣುಕು ಮಿಣುಕೆಂದು ದೀಪದ ಕಾಂತಿ ಅವನ ಕಣ್ಣಿಗೆ ಬಿತ್ತು. ಅಲ್ಲಿಗೆ ಹೋಗಿ ಆಶ್ರಯ ಕೇಳೋಣವೆಂದುಕೊಂಡನು.

ಡುಂಬನಿಗೆ ಹೋಗುವ ಪ್ರಾಣವು ಹಿಂದೆ ಬಂದ ಹಾಗೆ ಅನಿಸಿತು. ಅವನು ಆ ದೀಪವು ಕಾಣುವ ದಿಕ್ಕಿಗೇ ಹೋಗಿ ಒಂದು ಕುಟೀರವನ್ನು ತಲಪಿದನು. ಬಹಳ ಹೊತ್ತಿನವರೆಗೆ ಬಾಗಿಲು ತಟ್ಟಿದ ಮೇಲೆ ಬಾಗಿಲು ತೆರೆಯಲ್ಪಟ್ಟಿತು. ಬಾಗಿಲು ತೆರೆದವನು ಒಬ್ಬ ಮುದುಕ. ಆ ಮುದುಕ ಡುಂಬನನ್ನೇ ಪ್ರಶ್ನಾರ್ಥಕವಾಗಿ ನೋಡಿದನು.

"ಅಯ್ಯಾ, ಈ ಗುಡ್ಡಗಳ ಪ್ರಾಂತದಲ್ಲಿ ನನಗೆ ದಾರಿ ತಪ್ಪಿಹೋಯಿತು. ಈ ರಾತ್ರಿ ಹೊಟ್ಟೆಗೆ ಏನಾದರೂ ಕೊಟ್ಟು, ಮಲಗಲಿಕ್ಕೆ ಒಂದು ಮೂಲೆ



ಯಲ್ಲಿ ಜಾಗ ಕೊಡುವಿರಾ, ತಾತಯ್ಯಾ?" ಎಂದು ದೀನತೆಯಿಂದ ಕೇಳಿದನು ಡುಂಬ.

"ಒಳಗೆ ಬಾ. ಇಲ್ಲಿಗೆ ಐದಾರು ಹರದಾರಿ ದೂರದವರೆಗೆ ಯಾವ ಮನೆಯೂ ಇಲ್ಲ." ಎಂದನು ಮುದುಕ.

ಒಳಗೆ ಮುದುಕನ ಹೆಂಡತಿ ಏನೋ ಫಳಾರ ಮಾಡುತ್ತಿದ್ದಳು. ಅವಳು ತಲೆಯೆತ್ತಿ ಡುಂಬನನ್ನು ನೋಡಲೇ ಇಲ್ಲ. ಮಾತಾಡಿಸಲೂ ಇಲ್ಲ. ಮುದುಕ ನೊಂದಿಗೂ ಅವಳು ಒಂದು ಮಾತೂ ಹೇಳಲಿಲ್ಲ. ಮುದುಕನೂ ಅವಳನ್ನು ಮಾತಾಡಿಸಲಿಲ್ಲ. ಅವಳ ಅಡಿಗೆ ಮುಗಿದ ಮೇಲೆ, ಮೂವರೂ ಕುಳಿತು, ಫಳಾರಮಾಡಿ ಮುಗಿಸಿ ಮಲಗಿಕೊಂಡರು.

ಹೊಸ ಸ್ಥಳವಾದುದರಿಂದ ಡುಂಬ ಕಣ್ಣು ಮುಚ್ಚಿಕೊಂಡಿದ್ದರೂ ನಿದ್ದೆ ಮಾತ್ರ ಬರಲೇ ಇಲ್ಲ. "ಈ ಮುದುಕರು ಈ ನಿರ್ಜನ ಪ್ರದೇಶದಲ್ಲಿ ಏಕೆ ವಾಸಮಾಡಿಕೊಂಡಿದ್ದಾರೆ? ಏನೋ ಅನುಮಾನ ವಾಗಿದೆ. ಇವರದೇನೋ ರಹಸ್ಯವಿರಬೇಕು. ಅದನ್ನು ಕಂಡುಹಿಡಿಯದೆ ಬಿಡಬಾರದು" ಎಂದು ಕೊಂಡನು ಡುಂಬ.

ಅರ್ಧರಾತ್ರಿಯ ಹೊತ್ತಿಗೆ ಮುದುಕನು ಮೆಲ್ಲನೆ ಎದ್ದು ಬೆಕ್ಕಿನ ಹಾಗೆ ಸದ್ದಿಲ್ಲದಂತೆ ನಡೆಯುತ್ತಾ, ಮೂಲೆಯಲ್ಲಿದ್ದ ಒಂದು ಪೆಟ್ಟಿಗೆಯ ಹತ್ತಿರ ಹೋದನು. ಅವನು ಆ ಪೆಟ್ಟಿಗೆಯ ಮುಚ್ಚಳವನ್ನು ಎತ್ತಿ, ಅದರೊಳಗಿನಿಂದ ಒಂದು ನೀಲಬಣ್ಣದ ಕುಲಾವಿಯನ್ನು ತೆಗೆದುಕೊಂಡುದನ್ನು ಡುಂಬನು ನೋಡಿದನು. ಮುದುಕನು ಆ ಕುಲಾವಿಯನ್ನು ನಡುನೆತ್ತಿಯ ಮೇಲಿಟ್ಟುಕೊಂಡು, "ಕಾಶ್ಮೀರ! ಕಾಶ್ಮೀರ!" ಎಂದನು. ಕೂಡಲೇ ಇಂದ್ರ ಜಾಲದ ಹಾಗೆ ಮುದುಕನು ಮಾಯವಾದನು. ತರುವಾಯ ಮುದುಕಿ ಎದ್ದು ಆ ಪೆಟ್ಟಿಗೆಯ ಹತ್ತಿರ ಹೋಗಿ ಅದರೊಳಗಿನಿಂದ ಇನ್ನೊಂದು ನೀಲಕುಲಾವಿ ತೆಗೆದು ತನ್ನ ತಲೆಯ ಮೇಲಿಟ್ಟು ಕೊಂಡು, "ಕಾಶ್ಮೀರ! ಕಾಶ್ಮೀರ!" ಎಂದಳು ಅವಳು ಕೂಡಾ ಅಂತರ್ಧಾನಳಾಗಿ ಹೋದಳು.

ಇದನ್ನು ನೋಡಿ ಡುಂಬನಿಗೆ ದಿಗ್ಭ್ರಮೆ ಯುಂಟಾಯಿತು. ಅವರಿಬ್ಬರೂ ಆ ಕುಟೀರದೊಳಗೆ ಇಲ್ಲವೆಂದು ಗಟ್ಟಿಮಾಡಿಕೊಂಡು, ಅವನು ಕೂಡಾ ಎದ್ದು ಆ ಪೆಟ್ಟಿಗೆಯ ಬಳಿಗೆ ಹೋಗಿ, ಅದರ ಮುಚ್ಚಳ ತೆರೆದು ನೋಡಿದನು. ಅದರೊಳಗೆ ಇನ್ನೂ ಎರಡು ಮೂರು ನೀಲಬಣ್ಣದ ಕುಲಾವಿ ಗಳಿದ್ದುವು. ಡುಂಬನು ಅವುಗಳಲ್ಲೊಂದನ್ನು ತೆಗೆದು ತನ್ನ ನೆತ್ತಿಯ ಮೇಲೆ ಇಟ್ಟುಕೊಂಡು, "ಕಾಶ್ಮೀರ! ಕಾಶ್ಮೀರ!" ಎಂದನು.

ಕೂಡಲೇ ಅವನ ಕಣ್ಣುಗಳು ಭಾರದಿಂದ ಮುಚ್ಚಿಕೊಂಡುವು. ಗಾಳಿ ತನ್ನ ಮೇಲೆ ವಿಪರೀತ ವೇಗದಲ್ಲಿ ಬೀಸುತ್ತಿರುವಂತೆ ಅನುಭವವಾಯಿತು. ಆ ಗಾಳಿಯ ಹೋರೆಂಬ ಶಬ್ದವು ನಿಂತುಹೋದ

ಮೇಲೆ ಕಣ್ಣು ತೆರೆದು ನೋಡಿದನು. ಆಗ ಅವನು ಒಂದು ರಾಜಭವನದ ಭೋಜನಶಾಲೆಯಲ್ಲಿದ್ದನು. ಮುದುಕ ಮುದುಕಿಯರು ರಾಜನು ತಿಂದು ಉಳಿಸಿದ ಆಹಾರ ಪದಾರ್ಥಗಳನ್ನು ಎತ್ತಿ ಗಂಟು ಕಟ್ಟಿಕೊಳ್ಳುತ್ತಿದ್ದರು. ಚಿನ್ನದ ಲೋಟೆ ತಟ್ಟೆಗಳು ಕೂಡಾ ಅವರ ಗಂಟುಗಳೊಳಗೆ ಹೋಗುತ್ತಿದ್ದುವು. ಡುಂಬನನ್ನು ನೋಡಿದ ಕೂಡಲೇ ಅವರು, ಗಾಬರಿಯಾದವರಂತೆ, ಬೇಗಬೇಗನೆ ನೀಲ ಕುಲಾವಿಗಳನ್ನು ತಮ್ಮ ತಲೆಯಲ್ಲಿಟ್ಟು, "ಬದಿರೀ ಗುಡ್ಡಗಳು! ಬದಿರೀ ಗುಡ್ಡಗಳು!" ಎನ್ನುತ್ತ ಮಾಯವಾಗಿ ಹೋದರು.

ಅವರು ಹೊರಟುಹೋದ ಮೇಲೆ ಇನ್ನು ತನ್ನನ್ನು ಅಡ್ಡಿಪಡಿಸುವವರಿಲ್ಲವೆಂದುಕೊಂಡು ಡುಂಬನು ನಿಶ್ಚಿಂತೆಯಿಂದ ತನಗೆ ಬೇಕಾದ ಆಹಾರ ಪದಾರ್ಥಗಳನ್ನು ತಿಂದನು. ತರುವಾಯ ರಾಜನು ಕುಡಿಯುವ ದ್ರಾಕ್ಷಾರಸವು ಅವನ ಕಣ್ಣಿಗೆಬಿತ್ತು. ಅದನ್ನೆತ್ತಿ ವಿಪರೀತವಾಗಿ ಕುಡಿದು ಮೈಮರೆತು ಅಲ್ಲೇ ಬಿದ್ದನು.

ಬೆಳಂಜಾವುದ ಹೊತ್ತಿಗೆ ಮಹಾರಾಜನ ನೌಕರರು ಬಂದು ಭೋಜನ ಶಾಲೆಯಲ್ಲಿದ್ದ ಡುಂಬನನ್ನು ನೋಡಿ, ಒಡಿದು ಅವನ ಕೈಗಳನ್ನು ಕಟ್ಟಿ ರಾಜನ ಮುಂದೆ ಎಳೆದುಕೊಂಡು ಹೋದರು. "ಮಹಾಪ್ರಭೂ! ದಿನಾ ಯಾರ ಕಣ್ಣಿಗೂ ಬೀಳದ ಹಾಗೆ ನಮ್ಮ ಭವನದೊಳಗೆ ಹೊಕ್ಕು ಕಳ್ಳತನ ಮಾಡುವ ದೊಡ್ಡ ಗಜಚೋರ ಇವನೇ ಪ್ರಭೂ!" ಎಂದರು ಆ ನೌಕರರು.

"ಇಂಥಾ ಮಾಯದ ಕಳ್ಳ ಬದುಕಿರುವುದು ಒಳ್ಳೆಯದಲ್ಲ. ಇವನನ್ನು ಒಂದು ಕಂಬಕ್ಕೆ ಕಟ್ಟಿ, ಸುತ್ತಲೂ ಬೆಂಕಿಹಚ್ಚಿ, ಇವನನ್ನು ಸಜೀವದಹನ ಮಾಡಿಬಿಡಿರಿ" ಎಂದು ರಾಜನು ಅಪ್ಪಣೆ ಮಾಡಿದನು.



ಡುಂಬನನ್ನು ಸಾರ್ವಜನಿಕ ಕಟ್ಟೆಯ ಕಡೆಗೆ ಒಯ್ದರು. ಅಲ್ಲಿ ಒಂದು ದೊಡ್ಡ ದಪ್ಪದ ಮರದ ದಿಮ್ಮಿಯನ್ನು ಹುಗಿದು ಆ ಕಂಬಕ್ಕೆ ಡುಂಬನನ್ನು ಕಟ್ಟಿದರು. ತರುವಾಯ ಅವನ ಸುತ್ತಲೂ ದರಲೆ ಪುರುಲೆ ಒಣಹುಲ್ಲುಗಳನ್ನು ಪೇರಿಸಿ, ಅದರ ನಾಲ್ಕು ಬದಿಗಳಲ್ಲಿಯೂ ಬೆಂಕಿ ಹಚ್ಚಿದರು.

ಆ ಗಜಚೋರನನ್ನು ನೋಡಲು ನಗರದೊಳಗಿನ ಪ್ರಜೆಗಳು ಆಬಾಲಗೋಪಾಲರಾದಿಯಾಗಿ ಬಂದು ಗುಂಪುಗೂಡಿದರು.

ಏಕೆಂದರೆ ಮಹಾರಾಜನ ಭವನದೊಳಗೆ ದಿನಾ ಪ್ರವೇಶಿಸುವ ಕಳ್ಳನನ್ನು ಹಿಡಿಯಲು ವಿಶ್ವ ಪ್ರಯತ್ನ ನಡೆದಿದ್ದಿತು. ರಾಜಭವನದ ಸುತ್ತಲೂ ರಕ್ಷಕಭಟರ ಕಾವಲು ಬಲವಾಗಿದ್ದರೂ, ಕಳ್ಳನು ಯಾರ ಕಣ್ಣಿಗೂ ಬೀಳದಂತೆ ಏನೇನೋ ಕದ್ದುಕೊಂಡು ಹೋಗುತ್ತಿದ್ದನು. ಇದೊಂದು ದೊಡ್ಡ ಆಶ್ಚರ್ಯದ ಸುದ್ದಿಯಾಗಿತ್ತು. ಈ ಕಳ್ಳನು ಮನುಷ್ಯ

ನಲ್ಲವೆಂದೂ, ಯಾವುದೋ ಭೂತವೆಂದೂ ಜನರು ಹೇಳಿಕೊಳ್ಳುತ್ತಿದ್ದರು. ಅಂತಲೇ ಅಂತಹ ಕಳ್ಳನು ಸಿಕ್ಕಿಬಿದ್ದನೆಂದು ಕೇಳುತ್ತಲೇ ಅಷ್ಟು ಜನರು ನೋಡಲು ಬಂದರು.

ಬೆಂಕಿ ಉರಿಯುತ್ತ ಡುಂಬನನ್ನು ಸಮೀಪಿಸುತ್ತಿತ್ತು. ಅವನು ತನ್ನ ಆಯುಷ್ಯ ತೀರಿತೆಂದೇ ಅಂದುಕೊಂಡನು.

ಅಷ್ಟರಲ್ಲಿ ಅವನಿಗೆ ನೀಲ ಕುಲಾವಿ ನೆನಪಿಗೆ ಬಂದಿತು. ಅವನು ನ್ಯಾಯಾಧಿಕಾರಿಯ ಕಡೆಗೆ ತಿರುಗಿ, "ಅಯ್ಯಾ ಮಹಾ ಸ್ವಾಮಿ? ನನ್ನದೊಂದು ಕಡೇ ಕೋರಿಕೆ! ನನ್ನ ನೀಲ ಕುಲಾವಿಯನ್ನು ನನ್ನ ತಲೆಯ ಮೇಲೆ ಇಡಿಸಿಬಿಡಿ. ಅದರ ಮೇಲೆ ನನಗೆ ಪ್ರಾಣದಷ್ಟು ಪ್ರೀತಿ. ಅದನ್ನು ಕೂಡಾ ನನ್ನೊಂದಿಗೇ ಸುಟ್ಟು ಹೋಗುವಹಾಗೆ ಮಾಡಿರಿ!" ಎಂದು ಕೂಗಿದನು.

"ಅದೊಂದು ಅವನ ಇಷ್ಟದ್ದಾಗಿರಬೇಕೆಂದೂ, ಅವನ ಕೋರಿಕೆ ಈಡೇರಿಸುವುದರಿಂದ ತಪ್ಪೇನಿಲ್ಲವೆಂದೂ ನ್ಯಾಯಾಧಿಕಾರಿಗೆ ತೋರಿತು. ಅವನು ಆಜ್ಞಾಪಿಸಿದ ಮೇಲೆ ಒಬ್ಬ ಭಟನು ಚಿತಿಯ ಮೇಲಿನಿಂದಾಗಿ ನೀಲ ಕುಲಾವಿಯನ್ನು ಡುಂಬನ ತಲೆಯ ಮೇಲೆ ಇಟ್ಟನು. ಡುಂಬನು ಕೂಡಲೇ "ಬದರೀ ಗುಡ್ಡಗಳು! ಬದರೀ ಗುಡ್ಡಗಳು!" ಎನ್ನುತ್ತ ದಿಮ್ಮಿಯೊಂದಿಗೇ ಅದೃಶ್ಯನಾಗಿ ಹೋದನು. ಎಲ್ಲರೂ ಬಾಯಿತೆರೆದು ಸ್ತಂಭೀಭೂತರಾದರು.

ಡುಂಬನು ಬದರೀ ಗುಡ್ಡಗಳ ಪ್ರಾಂತಕ್ಕೆ ಸೇರಿದನು. ಅವನು ಇನ್ನೂ ದಿಮ್ಮಿಗೆ ಬಿಗಿದುಕೊಂಡೇ ಇದ್ದನು. ಅದನ್ನು ಬಿಚ್ಚಲು ಯಾರಾದರೂ ಸಿಗುವರೇನೋ ಎಂದು ತಲೆಯೆತ್ತಿ ನೋಡಿದಾಗ, ಒಬ್ಬ ಮನುಷ್ಯನು ಬರುವುದು ಕಾಣಿಸಿತು.

"ಓ ಪುಣ್ಯಾತ್ಮಾ! ಸ್ವಲ್ಪ ಬೇಗ ಬಂದು ನನ್ನ ಕಟ್ಟುಗಳನ್ನು ಬಿಚ್ಚಯ್ಯಾ! ನಿನಗೆ ಪುಣ್ಯ ಬರುತ್ತೆ" ಎಂದು ಕೂಗಿ ಹೇಳಿದನು ಡುಂಬ.

ಆ ಮನುಷ್ಯ ಬಂದು "ಎಲೆಲ! ಈ ಸ್ಥಳವಲ್ಲದ ಸ್ಥಳದಲ್ಲಿ ಈ ಭಾರೀ ದಿಮ್ಮಿಗೆ ಹೇಗೆ ಕಟ್ಟುಬಿದ್ದೀ? ಇದು ಒಳ್ಳೆಯ ದೇವದಾರು ದಿಂಡಾಗಿದೆಯಲ್ಲಾ!" ಎಂದು ಡುಂಬನ ಕಟ್ಟುಗಳನ್ನು ಬಿಚ್ಚಿದನು.

"ಹೌದು ಹೌದು. ನನಗೊಂದು ತೆಪ್ಪ ತಯಾರಿಸಿಕೊಳ್ಳಲು ಇದನ್ನು ತಂದುಕೊಂಡೆನು. ಕಾಶ್ಮೀರದ ಮಹಾರಾಜರು ಇದನ್ನು ನನಗೆ ಬಹುಮಾನವಾಗಿ ಕೊಟ್ಟರು. ನಾನೇ ನನ್ನನ್ನು ಹೀಗೆ ಕಟ್ಟಿಸಿಕೊಂಡೆನು. ಅಷ್ಟು ಪ್ರೀತಿ ಇದರ ಮೇಲೆ!" ಎಂದು ಹೇಳಿ ಡುಂಬನು ನಗುತ್ತ, ಆ ದಿಮ್ಮಿಯನ್ನು ಹೆಗಲ ಮೇಲೆ ಹೊತ್ತುಕೊಂಡು ತನ್ನ ಮನೆಯ ದಾರಿ ಹಿಡಿದನು.



# ಮಾತಿನ ಜಾಣತನ

ಕೆಲಸದ ಮೇಲೆ ಪಟ್ಟಣಕ್ಕೆ ಹೋದ ರಾಜಯ್ಯನೆಂಬ ರೈತನು ತನ್ನ ಕೆಲಸ ಮುಗಿಸಿಕೊಂಡು ಹಿಂದಿರುಗುತ್ತ, ಒಂದು ಅಂಗಡಿಯ ಮುಂದೆ ನಿಂತನು.

ಅದು ಶಾಲುವೆಗಳ ಅಂಗಡಿ. ಅದರ ಯಜಮಾನ ಅವನನ್ನು ಒಳಕ್ಕೆ ಕರೆದು, ಒಂದು ಶಾಲುವೆ ತೋರಿಸುತ್ತ "ನೀವು ಕೊಂಡುಕೊಳ್ಳುವಿರೋ ಬಿಡುವಿರೋ ಬೇರೆ ಸಂಗತಿ. ಇದು ಬಹಳ ಅಪರೂಪವಾದ ಶಾಲುವೆ. ಆದರೂ ಬೆಲೆ ಬಹಳ ಕಡಿಮೆ. ಇದನ್ನು ಹೊದ್ದುಕೊಂಡು ಹೊರಟಿರಾದರೆ, ನಿಮ್ಮನ್ನು ಸಾಕ್ಷಾತ್ ಊರಿನ ಜಮೀನ್ದಾರರೇ ಅಂದುಕೊಳ್ಳುತ್ತಾರೆ. ಒಂದು ಸಾರಿ ಹೊದ್ದುಕೊಂಡು ಹಾಗೊಮ್ಮೆ ಬೀದಿಗೆ ಹೋಗಿ ಬನ್ನಿ" ಎಂದು ಶಾಲುವೆಯನ್ನು ರಾಜಯ್ಯನ ಹೆಗಲುಗಳ ಮೇಲೆ ಹೊದಿಸಿದನು.

ರಾಜಯ್ಯ ದಾಕ್ಷಿಣ್ಯಪಡುತ್ತ ಆ ಶಾಲುವೆಯೊಂದಿಗೆ ಬೀದಿಯಲ್ಲಿ ಆಚೆಬದಿಯಿಂದ ಈಚೆಬದಿಯ ವರೆಗೆ ಒಮ್ಮೆ ಹೋಗಿ ಅಂಗಡಿಗೆ ಬರುವಾಗ, ಅದರ ಯಜಮಾನ, "ಆಹಾ! ಬಹಳ ಅಪರೂಪದ ಶಾಲುವೆ ಹೊದೆದುಕೊಂಡ ನೀವು ತಪ್ಪದೆ ಈ ಊರಿನ ಜಮೀನ್ದಾರರೇ ಆಗಿರಬೇಕು! ಮಹಾಭಾಗ್ಯ! ಏನು ಅಪ್ಪಣೆ ಸ್ವಾಮಿ!" ಎಂದನು ರಾಜಯ್ಯನ ಗುರುತಿಲ್ಲದವನಂತೆ.

ಅಂಗಡಿಗಾರನ ಮಾತಿನ ಜಾಣತನಕ್ಕೆ ಮುಗ್ಧನಾದ ರಾಜಯ್ಯ ಆ ಶಾಲುವೆಯನ್ನು ಸಂತೋಷದಿಂದಲೇ ಕೊಂಡುಕೊಂಡನು.






ಪೂರ್ವಕಾಲದಲ್ಲಿ ಒಬ್ಬ ಸುಲ್ತಾನನಿದ್ದನು. ಅವನು ಯಾವಾಗಲಾದರೊಮ್ಮೆ ಬೇಟೆಯಾಡಲು ಹೋಗುವುದುಂಟು. ಹಾಗೆ ಒಂದುಸಾರಿ ಅವನು ಬೇಟೆಯಾಡಲು ಹೋಗುವಾಗ, ದಾರಿಯಲ್ಲಿ ಅಡವಿಗಳ ನಡುವಿನಲ್ಲಿ ಅವನಿಗೆ ಒಬ್ಬ ರೈತನು ಕಂಡುಬಂದನು. ಆ ರೈತನು ಒಂದು ಹೊರೆಹೊತ್ತ ಕತ್ತೆಯನ್ನು ನಡೆಸಿಕೊಂಡು ಬರುತ್ತಿದ್ದನು.

ಸುಲ್ತಾನನು ತನ್ನ ಕುದುರೆಯನ್ನು ನಿಲ್ಲಿಸಿ ಆ ರೈತನನ್ನು ಮಾತಾಡಿಸುತ್ತ, "ತಮ್ಮಾ, ಅದರ ಬೆನ್ನಿನ ಮೇಲಿರುವ ಮೂಟೆಯಲ್ಲಿ ಏನಿದೆ?" ಎಂದು ಕೇಳಿದನು.

"ಅಯ್ಯಾ, ಇವು ಸೌತೇಕಾಯಿಗಳು. ನನ್ನ ತೋಟದಲ್ಲಿ ಬೆಳೆಸಿದಂಥವು. ಫಲಿಸುವ ಕಾಲಕ್ಕೆ ಮೊದಲೇ ಪಕ್ವಕ್ಕೆ ಬಂದಿವೆ. ಇವುಗಳನ್ನು ಸುಲ್ತಾನ್ ಅವರಿಗೆ ಮಾರೋಣವೆಂದು ಹೊರಟಿದ್ದೇನೆ. ಅವರು ತುಂಬ ಧಾರಾಳ ಕೈಯವರೆಂದು ಕೇಳಿದ್ದೇನೆ. ಒಳ್ಳೆಯ ಬೆಲೆ ಸಿಗುತ್ತದೆಂಬ ಆಶೆ" ಎಂದನು ರೈತ. ಅವನು ಈ ಮೊದಲು ಎಂದೂ ಸುಲ್ತಾನನನ್ನು ನೋಡಲಿಲ್ಲ.

"ಸುಲ್ತಾನರು ನಿನ್ನ ಸೌತೇಕಾಯಿಗಳಿಗೆ ಎಷ್ಟು ಕೊಡುವರೆಂದು ಅಂದುಕೊಂಡಿದ್ದೀ?" ಎಂದು ಕೇಳಿದನು ಸುಲ್ತಾನ.

"ಕಡೇಪಕ್ಷ ಸಾವಿರ ಬಂಗಾರದ ದೀನಾರಗಳನ್ನಾದರೂ ಕೊಡದಿದ್ದಾರೆ?" ಎಂದನು ರೈತ.

"ಅದು ಬಹಳ ಹೆಚ್ಚಾಗುತ್ತದೆಂದು ಸುಲ್ತಾನರು ಅಂದುಕೊಂಡರೆ ನೀನೇನು ಮಾಡುವಿ?" ಎಂದು ಸುಲ್ತಾನನು ಕೇಳಿದನು.

"ಹೋಗಲಿ, ಐನೂರಾದರೂ ಕೊಡಿರಿ ಎಂದು ಕೇಳುತ್ತೇನೆ" ಎಂದನು ರೈತ.

"ಅದು ಕೂಡಾ ಹೆಚ್ಚೇ ಅಂದರೆ?"

"ಮುನ್ನೂರು ದೀನಾರಗಳು ಕೊಡಿ ಎನ್ನುತ್ತೇನೆ"

"ಅದೂ ಹೆಚ್ಚೆಂದು ಅವರಿಗೆ ತೋರುತ್ತದೆ, ಅಂದುಕೋ."

"ನೂರು ಕೊಡಿರಿ ಅನ್ನುತ್ತೇನೆ"

"ಅದು ಕೂಡಾ ಹೆಚ್ಚಾಯಿತೆಂದರೆ?"

"ಐವತ್ತು ಕೇಳುತ್ತೇನೆ"

"ಸೌತೇಕಾಯಿಗಳಿಗೆ ಅಷ್ಟಾದರೂ ಏಕಷ್ಟು ಅಂತ ಅವರಿಗೆ ಕಂಡರೆ?"

ಅರೇಬಿಯಾ ಕಥೆ

"ಮೂವತ್ತು ದೀನಾರ ಕೇಳುತ್ತೇನೆ"

"ಅಷ್ಟು ಸಹ ಕೊಡಲಾಗುವುದಿಲ್ಲ ಅಂದರಂದುಕೋ"

"ಆಗ ನನ್ನ ಕತ್ತೆಯನ್ನು ಅವರ ಸಿಂಹಾಸನ ಮೇಲಕ್ಕೆ ದೂಡಿ ಓಡಿಹೋಗಿ ಬಿಡುತ್ತೇನೆ" ಎಂದ ರೈತ.

ಸುಲ್ತಾನನು ಬಿದ್ದು ಬಿದ್ದು ನಗುತ್ತಾ, ರೈತನನ್ನು ಮುಂದೆ ಹೋಗಲು ಬಿಟ್ಟನು. ಆಮೇಲೆ ಅವನು ಬೇಟೆಗೆ ಹೋಗದೆ, ಇನ್ನೊಂದು ದಾರಿಯಿಂದ ತನ್ನ ಭವನಕ್ಕೆ ಹಿಂದಿರುಗಿ ಬಿಟ್ಟನು. ಬಂದ ಕೂಡಲೇ ಅವನು ದ್ವಾರಪಾಲಕರೊಂದಿಗೆ, "ನನ್ನನ್ನು ನೋಡಲು ಒಬ್ಬ ರೈತನು ಕತ್ತೆಯೊಂದಿಗೆ ಬರುತ್ತಾನೆ. ಅವನನ್ನು ತಡೆಯದೆ ನೇರಾಗಿ ನನ್ನ ಹತ್ತಿರ ಬರುವ ಹಾಗೆ ಮಾಡಿರಿ" ಎಂದು ಅಜ್ಞೆ ಮಾಡಿದನು.

ಮತ್ತೊಂದು ಗಂಟೆಯ ಮೇಲೆ ರೈತನು ಕತ್ತೆಯನ್ನು ಹೊಡೆದುಕೊಂಡು ಸುಲ್ತಾನನ ಭವನದ ದ್ವಾರದ ಹತ್ತಿರ ಬಂದು, ಸುಲ್ತಾನರ ದರ್ಶನವಾಗಬೇಕೆಂದು ಕೇಳಿದನು. ದ್ವಾರಪಾಲಕರು ಅವನನ್ನೂ ಕತ್ತೆಯನ್ನೂ ಒಳಗೆ ಹೋಗಲು ಬಿಟ್ಟರು.

ಸುಲ್ತಾನನು ವೇಷ ಬದಲಾವಣೆ ಮಾಡಿಕೊಂಡು ಅವನನ್ನು ಇದಿರು ನೋಡುತ್ತಾ ಹೊರಗಿನ ಆವರಣದಲ್ಲೇ ಕುಳಿತಿದ್ದನು. ಆದುದರಿಂದ ಸುಲ್ತಾನನ ಗುರುತು ರೈತನಿಗೆ ಆಗಲಿಲ್ಲ. ಅವನು ಕತ್ತೆಯ ಮೇಲಿನಿಂದ ಸೌತೇಕಾಯಿಗಳ ಮೂಟೆಯನ್ನು ಕೈಯಲ್ಲಿ ಹಿಡಿದುಕೊಂಡು ಅತ್ಯಂತ ವಿನಯದಿಂದ ಸುಲ್ತಾನನ ಇದಿರಿನಲ್ಲಿ ನಿಂತುಕೊಂಡನು.

"ನನಗಾಗಿ ಏನೋ ತಂದ ಹಾಗಿದೆ. ಏನಪ್ಪಾ ಮೂಟೆಯಲ್ಲಿ?" ಎಂದು ಸುಲ್ತಾನನು ಕೇಳಿದನು.

"ಆಳುವ ಮಹಾಸ್ವಾಮಿಗಳು ಅನುಗ್ರಹಿಸಿದರೆ ನನ್ನ ತೋಟದಲ್ಲಿ ಬೆಳೆಸಿದ ಮೊದಲನೇ ಫಲ ಈ ಸೌತೇಕಾಯಿಗಳನ್ನು ಕೊಡೋಣವೆಂದು ತಂದಿದ್ದೇನೆ" ಎಂದನು ರೈತ.



"ಭೇಷ್ ಒಳ್ಳೇದು, ನನ್ನ ಅನುಗ್ರಹ ಎಷ್ಟರ ವರೆಗೆ ಇದೆ ಎಂದು ಅಂದುಕೊಂಡಿದ್ದೀ ? " ಎಂದು ಸುಲ್ತಾನನು ನಗುತ್ತಾ ಕೇಳಿದನು.

"ಸಾವಿರ ದೀನಾರಗಳಷ್ಟು ಅಂದುಕೊಂಡಿದ್ದೇನೆ" ಎಂದು ರೈತನು ಹೇಳಿದುದನ್ನು ಕೇಳಿ "ಅದು ಬಹಳ ಹೆಚ್ಚಾಯಿತು" ಎಂದನು ಸುಲ್ತಾನ.

"ಐದುನೂರು ಪ್ರಭೂ"

"ಅದೂ ಹೆಚ್ಚೇ"

"ಮುನ್ನೂರಾದರೂ"

"ಅದೂ ಹೆಚ್ಚಪ್ಪಾ !"

"ನೂರು ದಯಮಾಡಿಸಿರಿ"

"ಅದು ಕೂಡಾ ಹೆಚ್ಚೆಂದೇ ಕಾಣುತ್ತದೆ"

"ಐವತ್ತಾದರೂ"

"ಅದೂ ಹೆಚ್ಚಾಯಿತು"

"ಮೂವತ್ತು"

"ಅದು ಕೂಡಾ ಹೆಚ್ಚೇ"

"ಆ ಹಾಳು ಮೋರೆಯವನೊಬ್ಬ ದಾರಿಯಲ್ಲೇ ಗಂಟುಬಿದ್ದು ಕೇಡು ಬಂತು. ಮೂವತ್ತು ಕೂಡಾ ಕೊಡದಿದ್ದರೆ ಸಾಧ್ಯವೇ ಇಲ್ಲ !" ಎಂದನು ರೈತ.

ಸುಲ್ತಾನನು ನೆಗಾಡಿದನೇ ಹೊರತು ಉತ್ತರ ವೇನೂ ಹೇಳಲಿಲ್ಲ. ಅದನ್ನು ಗಮನಿಸಿದ ರೈತನು ಸುಲ್ತಾನನ ಮುಖವನ್ನು ಮತ್ತಷ್ಟು ಪರೀಕ್ಷೆಯಿಂದ ನೋಡಿ, ತನಗೆ ದಾರಿಯಲ್ಲಿ ಕುದುರೆಯ ಮೇಲೆ ಕಂಡವನು ಈ ಸುಲ್ತಾನನೇ ಎಂದು ತಿಳಿದನು.

"ಹುಜೂರ್, ದಯಮಾಡಿ ನನಗೆ ಮೂವತ್ತು ದೀನಾರಗಳನ್ನು ಕೂಡಲೇ ಕೊಡಿಸಿಬಿಡಿರಿ. ಇಲ್ಲದಿದ್ದರೆ ನನ್ನ ಕತ್ತೆಯನ್ನು—ತಮಗೆ ಗೊತ್ತಿದೆ, ಅದನ್ನು ಹೇಳಬೇಕಾಗಿಲ್ಲ, ಹೊರಗೇ ಕಟ್ಟಿದ್ದೇನೆ" ಎಂದನು ರೈತ ಧೈರ್ಯದಿಂದ.

ಸುಲ್ತಾನನು ನಗುವನ್ನು ತಾಳಿಕೊಳ್ಳಲಾಗದೆ ಆಸನದ ಮೇಲೆ ಹಾಗೆಯೇ ಬಿದ್ದನು. ಆಮೇಲೆ ಅವನು ತನ್ನ ಖಜಾನಾದಾರನನ್ನು ಕರೆದು, "ಈ ರೈತನಿಗೆ ಸಾವಿರ ದೀನಾರಗಳನ್ನು ಎಣಿಸಿಕೊಡು. ಆಮೇಲೆ ಮತ್ತೊಂದು ಐನೂರು ತೆಗೆ. ಅದರ ನಂತರ ಮುನ್ನೂರೂ, ನೂರೂ, ಐವತ್ತೂ, ಮೂವತ್ತೂ ದೀನಾರಗಳನ್ನು ಸಾಲಾಗಿ ಎಣಿಸಿ ಇಲ್ಲಿಡು" ಎಂದು ಅಪ್ಪಣೆ ಮಾಡಿದನು.

ಒಂದು ಮೂಟೆ ಸೌತೇಕಾಯಿಗಳಿಗೆ ಹತ್ತೊಂಬತ್ತು ನೂರ ಎಂಬತ್ತು ದೀನಾರಗಳು ದೊರಕಿದುದನ್ನು ನೋಡಿ ರೈತನ ಬಾಯಿಯಿಂದ ಮಾತೇ ಹೊರಡಲಿಲ್ಲ, ಅವನು ಹಿಡಿಸಲಾಗದಷ್ಟು ಆನಂದದಿಂದ ಸುಲ್ತಾನನಿಗೆ ಸಾವಿರ ಸಲಾಮುಗಳನ್ನು ಸಲಿಸಿ, ದೀನಾರಗಳ ಮೂಟೆಯನ್ನು ಕತ್ತೆಯ ಮೇಲೆ ಹೊರಿಸಿಕೊಂಡು ಅಲ್ಲಿಂದ ಹೊರಟುಹೋದನು.





# ಶಿವಪುರಾಣ

ಪಾರ್ವತಿ ಹೇಳಿದುದನ್ನು ಕೇಳಿ ಲಕ್ಷ್ಮೀಗಣಾಧಿಪತಿ ಮಹಾವಿಷ್ಣುವಿನ ಬಳಿಗೆ ಹೋಗಿ ತನಗೆ ನಡೆದ ಅನ್ಯಾಯವನ್ನು ಹೇಳಿಕೊಂಡು. "ನಾನು ಕುಮಾರ ಸ್ವಾಮಿಯೊಂದಿಗೆ ಸ್ಪರ್ಧೆಗೆ ನಿಂತು ಭೂಪ್ರದಕ್ಷಿಣೆ ಮಾಡಿ ಬರಲು ಸಾಧ್ಯವೆ? ಕುಮಾರಸ್ವಾಮಿ ಆಗಲೇ ಹೊರಟು ನವಿಲಿನ ಮೇಲೆ ಹಾರಿಕೊಂಡು ಹೋಗಿದ್ದಾನೆ. ಈಗ ನಾನೇನು ಮಾಡಲಿ? ನೀವೇ ಹೇಳಬೇಕು" ಎಂದನು.

ವಿಷ್ಣು ಅವನನ್ನು ನೋಡಿ. "ಅಪ್ಪಾ. ಇದಕ್ಕಾಗಿ ಚಿಂತಿಸಬೇಡ. ಶಿವ ಪಂಚಾಕ್ಷರೀ ಮಂತ್ರವನ್ನು ಐದು ಲಕ್ಷದಷ್ಟು ಜಪಿಸಿ, ಪಾರ್ವತೀ ಪರಮೇಶ್ವರರ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ ಮಾಡಿದಿ ಯೆಂದರೆ ನಿನಗೆ ಭೂಪ್ರದಕ್ಷಿಣೆ ಮಾಡಿದ ಫಲಿತವೂ ತೀರ್ಥಯಾತ್ರೆಗಳ ಫಲಿತವೂ ದಕ್ಕಿ ಬಿಡುತ್ತದೆ" ಎಂದು ಹೇಳಿದನು.

ಲಕ್ಷ್ಮೀಗಣಪತಿ ಹಾಗೆಯೇ ಸಂತೃಪ್ತನಾಗಿ. ಒಂದು ಪ್ರಶಸ್ತ ಜಾಗದಲ್ಲಿ ದರ್ಭಾಸನದ ಮೇಲೆ ಕಣ್ಣುಮುಚ್ಚಿ ಕುಳಿತುಕೊಂಡು ಶಿವ ಪಂಚಾಕ್ಷರಿ ಯನ್ನು ಲೆಕ್ಕ ತಪ್ಪದಂತೆ ಜಪಿಸತೊಡಗಿದನು.

ಆ ಸಮಯದಲ್ಲಿ ಕುಮಾರಸ್ವಾಮಿ ನವಿಲಿನ ಮೇಲೆ ಹಾರುತ್ತಾ ಮೊದಲನೇ ತೀರ್ಥವನ್ನು ಸೇರಲಿರುವಾಗ, ಅಲ್ಲಿ ಲಕ್ಷ್ಮೀಗಣಪತಿ ತೀರ್ಥದಲ್ಲಿ ಸ್ನಾನಮಾಡಿ, ಆ ತೀರ್ಥದಿಂದ ಮತ್ತೊಂದು ತೀರ್ಥಕ್ಕೆ ಹೋಗುವಂತೆ ದೂರದಿಂದ ತೋರಿತು.

ಕುಮಾರಸ್ವಾಮಿ ಸಂಶಯಪಡುತ್ತ ಹತ್ತಿರ ಬಂದು ನೋಡುವಾಗ ಮರಳಿನಲ್ಲಿ ಇಲಿಯ ಪಾದಗಳ ಗುರುತು ಮೂಡಿರುವುದೂ ಕಂಡಿತು. ಅದನ್ನು ನೋಡಿ ಕುಮಾರಸ್ವಾಮಿಗೆ ಆಶ್ಚರ್ಯ ವಾಯಿತು.

ಕುಮಾರಸ್ವಾಮಿ ಆ ತೀರ್ಥ ಕ್ಷೇತ್ರದಲ್ಲಿದ್ದವರ ಹತ್ತಿರ, "ಅಯ್ಯಾ. ಇಲ್ಲಿಗೆ ದೊಡ್ಡ ಹೊಟ್ಟೆಯ ಗಿಡ್ಡನೊಬ್ಬನು ಇಲಿಯ ಮೇಲೇರಿಕೊಂಡು ಬಂದು ಸ್ನಾನಮಾಡಿ ಹೋದುದನ್ನು ನೋಡಿದಿರಾ?" ಎಂದು ವಿಚಾರಿಸಿದನು.

## ೧೦. ಗಣಾಧಿಪತಿ



"ಹೌದಪ್ಪಾ, ಹೌದು. ಈಗ ತಾನೇ ಹೋದನು. ಅಕೋ, ದೂರದಲ್ಲಿ ಇನ್ನೂ ಕಾಣುತ್ತಲೇ ಇದ್ದಾನೆ ನೋಡು. ದೊಡ್ಡ ಪುಣ್ಯಾತ್ಮ. ನಮಗೆಲ್ಲಾ ತಲಾ ಒಂದೊಂದು ಸುವರ್ಣದಾನ ಕೂಡಾ ಮಾಡಿದ! ಗಿಡ್ಡನಾದರೂ ದೊಡ್ಡ ಘನಶಾಲಿಯಾಗಿದ್ದಾನೆ" ಎಂದರು ಅಲ್ಲಿರುವವರು.

"ಆಹಾ! ಗಿಡ್ಡನು ಎಂಥಾ ಕೆಲಸ ಮಾಡುತ್ತಾನೆ! ಇಲ್ಲಿ ಸ್ನಾನಮಾಡುತ್ತಾ ಕಾಲಯಾಪನೆ ಮಾಡಬಾರದು. ಮೊದಲು ಬರುವ ತೀರ್ಥದಲ್ಲಿ ಸ್ನಾನ ಮಾಡುತ್ತೇನೆ" ಎಂದುಕೊಂಡು ಕುಮಾರಸ್ವಾಮಿ ಮುಂದಿನ ಕ್ಷೇತ್ರಕ್ಕೆ ಹೋದನು. ಆದರೆ ಅವನು ಅಲ್ಲಿಗೆ ಸೇರುವಷ್ಟರಲ್ಲಿ ಲಕ್ಷ್ಮೀಗಣಪತಿ ಆ ಕ್ಷೇತ್ರದಲ್ಲಿ ಸ್ನಾನ ಮುಗಿಸಿ ಹೊರಟು ಹೋಗುತ್ತಿರುವುದು ಸ್ಪಷ್ಟವಾಯಿತು!

ಎಲ್ಲಿಗೆ ಹೋದರೂ ಕುಮಾರಸ್ವಾಮಿಗೆ ಇದೇ ಅನುಭವವಾಯಿತು. ಅಂತಲೇ ಅವನು ಯಾವ ತೀರ್ಥವನ್ನೂ ಸೇವಿಸದೆಯೇ, ಭೂಪ್ರದಕ್ಷಿಣೆ ಮಾತ್ರ ಮಾಡಿ ಕೈಲಾಸಕ್ಕೆ ಬಂದು ಸೇರಿದನು. ಇಷ್ಟರೊಳಗೆ ಲಕ್ಷ್ಮೀಗಣಪತಿ ಐದು ಲಕ್ಷ ಶಿವ ಪಂಚಾಕ್ಷರೀ ಜಪಿಸಿ, ಪಾರ್ವತೀ ಪರಮೇಶ್ವರರ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ ಮಾಡಿ ವಿನಯಂ ವಿಧೇಯತೆಗಳಿಂದ ನಿಂತನು.

ಸಭೆಯಲ್ಲಿರುವವರೆಲ್ಲರೂ ಗುಸಗುಸಲಾಡಿಕೊಂಡು, "ಈ ಲಕ್ಷ್ಮೀಗಣಪತಿ ಭೂಪ್ರದಕ್ಷಿಣೆ ಏನೂ ಮಾಡದೆ, ಏನೋ ಸುಲಭೋಪಾಯದಿಂದ ಗಣಾಧಿಪತ್ಯ ಸಂಪಾದಿಸಬಹುದೆಂದು ಯೋಚಿಸಿದ್ದಾನೆ" ಎಂದುಕೊಂಡರು.

ಆಗ ಕುಮಾರಸ್ವಾಮಿ ತಿರುಗಿಬಂದು ಪಾರ್ವತೀ ಪರಮೇಶ್ವರರೊಂದಿಗೆ, "ನಾನು ಗಣಾಧಿಪತ್ಯಕ್ಕೆ ಅರ್ಹನಾದವನಲ್ಲವೆಂದು ಈಗ ಚೆನ್ನಾಗಿ ತಿಳಿದುಕೊಂಡೆನು. ಲಕ್ಷ್ಮೀಗಣಪತಿಗೇ ಗಣಾಧಿಪತ್ಯವನ್ನು ಕೊಡಿರಿ" ಎಂದು ಹೇಳಿದನು.

ಶಿವನ ಸಭೆಯಲ್ಲಿರುವವರೂ, ಪಾರ್ವತೀ ಪರಮೇಶ್ವರರೂ ಸಹಾ ಕುಮಾರಸ್ವಾಮಿಯ ಮಾತು ಕೇಳಿ ಆಶ್ಚರ್ಯಪಟ್ಟರು.

"ಹೀಗೇಕೆ ಹೇಳುವೆ ಕುಮಾರಸ್ವಾಮೀ?" ಎಂದು ಪಾರ್ವತಿ ಕೇಳಿದಳು.

"ನಾನು ಪ್ರಪಂಚದಲ್ಲಿರುವ ಎಲ್ಲಾ ಕ್ಷೇತ್ರಗಳಿಗೂ ಹೋದೆನು. ಆದರೆ ಯಾವ ತೀರ್ಥದಲ್ಲಿಯೂ ಸ್ನಾನಮಾಡಲಿಲ್ಲ. ಏಕೆಂದರೆ ಪ್ರತಿ ತೀರ್ಥದಲ್ಲಿಯೂ ಈ ಲಕ್ಷ್ಮೀಗಣಪತಿ ನನಗಿಂತ ಮೊದಲೇ ಸ್ನಾನಮಾಡಿ ಹೊರಟು ಹೋಗುವುದು ನನಗೆ ಕಂಡಿದೆ. ತೀರ್ಥ ಕ್ಷೇತ್ರಗಳಲ್ಲಿದ್ದವರು ಕೂಡಾ ಅದೇ ಮಾತನ್ನು ಹೇಳಿದರು. ಇವನು ನನಗಿಂತಲೂ ಎಷ್ಟೋ ಪಾಲು ಹೆಚ್ಚು ಶಕ್ತಿಯುಳ್ಳವನು. ರುದ್ರಗಣಗಳಿಗೆ ನಾಯಕನಾಗಿರಲು ಅವನೇ ತಕ್ಕವನು. ನಾನು ಅಲ್ಲವೇ ಅಲ್ಲ" ಎಂದನು ಕುಮಾರಸ್ವಾಮಿ.



ಯಾವುದರಿಂದಲೂ ನಮಗೆ ಸಾವು ಬರಬಾರದು. ಹಾಗೆ ವರವನ್ನು ಅನುಗ್ರಹಿಸು ! ಮತ್ತು ಸಕಲ ವಿದ್ಯೆಗಳೂ, ತಪಸ್ಸಿನ ಶಕ್ತಿಗಳೂ, ಐಶ್ವರ್ಯ, ಭೋಗಭಾಗ್ಯಗಳೂ, ಶಿವಭಕ್ತಿಯೂ, ಬೆಳ್ಳಿ ಬಂಗಾರ ಮತ್ತು ಕಬ್ಬಿಣಗಳಿಂದ ಮಾಡಲ್ಪಟ್ಟ ಮೂರು ನಗರಗಳೂ ನಮಗೆ ಬೇಕು" ಎಂದರು ಆ ಮೂವರೂ.

ಬ್ರಹ್ಮನು ಅವರು ಕೇಳಿದ ವರಗಳನ್ನೆಲ್ಲಾ ಕೊಟ್ಟು ಅವರಿಗೆ ವಾಸ ಮಾಡಲು ಬೇಕಾದಂತಹ ಪುರಗಳನ್ನು ನಿರ್ಮಿಸಿಕೊಡಲು ವಿಶ್ವಕರ್ಮನಿಗೆ ಅಪ್ಪಣೆಮಾಡಿ, ಅದೃಶ್ಯನಾದನು.

ವಿಶ್ವಕರ್ಮನು ಬಂಗಾರದಿಂದ, ಬೆಳ್ಳಿಯಿಂದ ಕಬ್ಬಿಣದಿಂದ ಮೂರು ಪುರಗಳನ್ನು ನಿರ್ಮಿಸಿ, ತಾರಕನ ಕುಮಾರರಿಗೆ ಒಪ್ಪಿಸಿದನು. ಅವುಗಳು ತ್ರಿಪುರಗಳೆಂದು ಪ್ರಸಿದ್ಧವಾದುವು. ಅವುಗಳಿಗೆ ಕಾಮಗಮನ ಶಕ್ತಿಯೂ ಇದ್ದುವು. ಅವುಗಳು ಮೂರೂ ಆಕಾಶದಲ್ಲಿ ನಿಂತಿರುತ್ತಿದ್ದುವು. ಅವುಗಳಲ್ಲಿ ಮನೆಗಳು, ಮರಗಳು, ಕೆರೆಕುಂಟೆ ಸರೋವರಗಳೂ ಇದ್ದುವು. ಧನಧಾನ್ಯ ಸಮೃದ್ಧಿಯೂ ಇದ್ದಿತು. ಬಂಗಾರದ ಪುರದಲ್ಲಿ ತಾರಕಾಕ್ಷನೂ, ಬೆಳ್ಳಿಯ ನಗರದಲ್ಲಿ ಕಮಲಾಕ್ಷನೂ, ಕಬ್ಬಿಣದ ಊರಿನಲ್ಲಿ ವಿದ್ಯುನ್ಮಾಲಿಯೂ ತಮ್ಮ ತಮ್ಮ ನಿವಾಸಗಳನ್ನು ಏರ್ಪಡಿಸಿಕೊಂಡು ಅವರುಗಳು ಮೂರು ಲೋಕಗಳಲ್ಲಿಯೂ ಸ್ವೇಚ್ಛೆಯಾಗಿ ತಿರುಗ ತೊಡಗಿದರು.

ಈ ತ್ರಿಪುರಗಳ ಹಾವಳಿ ಹೆಚ್ಚು ಹೆಚ್ಚಾಗುತ್ತಾ ಬರುತ್ತಿತ್ತು. ಅವುಗಳನ್ನು ಜಯಿಸಲು ಅಥವಾ ಹತೋಟಿಯಲ್ಲಿಡಲು ಇಂದ್ರನೇ ಮೊದಲಾದ ದೇವತೆಗಳಿಗೆ ಸಾಧ್ಯವಾಗುವ ಕಾರ್ಯವಲ್ಲ. ಅವರು ಬ್ರಹ್ಮನ ಬಳಿಗೆ ಹೋಗಿ, "ಮಹಾ ಪ್ರಭೂ ! ತ್ರಿಪುರಾಸುರರೆಂಬ ತಾರಕಾಸುರನ ಕುಮಾರತ್ರಯರು ನಮ್ಮನ್ನು ಅನೇಕಸಾರಿ ಕಾಡುತ್ತಿದ್ದಾರೆ. ಅವರ ನಗರಗಳು ಹಾರಿಬಂದು ನಮ್ಮ ಮನೆಮಾರುಗಳ ಮೇಲೆ ಎರಗಿ ಎಲ್ಲವನ್ನೂ ನೆಲಸಮ ಮಾಡುತ್ತಿವೆ. ಹೀಗೇ ಬಿಟ್ಟರೆ ಪ್ರಪಂಚವೆಲ್ಲಾ ಅಳಿದು ಹೋಗುವ ಭಯವಿದೆ. ಏನಾದರೂ ಮಾಡಿ ಕಾಪಾಡಬೇಕಾಗಿದೆ" ಎಂದು ಮೊರೆಯಿಟ್ಟುಕೊಂಡರು.

"ಹೌದು. ನನಗೂ ಗೊತ್ತಿದೆ. ಆ ತ್ರಿಪುರಾಸುರರು ಸುಲಭದಲ್ಲಿ ಸಾಯುವವರಲ್ಲ. ನಾವು ಹೋಗಿ ಶಿವನ ಆಲೋಚನೆ ಕೇಳೋಣ. ಬನ್ನಿ " ಎಂದು ಬ್ರಹ್ಮನು ದೇವತೆಗಳನ್ನೆಲ್ಲಾ ಕರೆದುಕೊಂಡು ಶಿವನ ಬಳಿಗೆ ಬಂದನು.

ಶಿವನು ಅವರು ಬಂದ ಕಾರ್ಯವನ್ನು ಕೇಳಿ ತಿಳಿದುಕೊಂಡು, "ಆ ತ್ರಿಪುರಾಸುರರನ್ನು ನಾನು ಕೊಲ್ಲಲಾರೆನು. ಬೇಕಾದರೆ ನನ್ನ ತೇಜಸ್ಸಿನಲ್ಲಿ ಅರ್ಧವನ್ನು ಕೊಡುತ್ತೇನೆ. ನೀವೇ ಅವರನ್ನು ಕೊಲ್ಲಬೇಕಷ್ಟೆ" ಎಂದನು.

ಆಗ ಬ್ರಹ್ಮನು ತ್ರಿಪುರಾಸುರರು ಕೇಳಿದ ವರಗಳ ವಿವರವನ್ನು ಹೇಳಿ, "ಓ ದೇವತೆಗಳೇ, ನೀವು

ನಮ್ಮ ತೇಜಸ್ಸುಗಳನ್ನು ಕೂಡಾ ತೆಗೆದುಕೊಂಡು ತ್ರಿಪುರಾಸುರರನ್ನು ನೀವೇ ಕೊಲ್ಲಬೇಕು" ಎಂದನು.

ರಥವಲ್ಲದ ರಥವೂ, ಬಿಲ್ಲಲ್ಲದ ಬಿಲ್ಲೂ, ಬಾಣವಲ್ಲದ ಬಾಣವೂ ತ್ರಿಪುರ ಸಂಹಾರಕ್ಕೆ ಬೇಕು. ಆದುದರಿಂದ ಶಿವನು ಭೂಮಿಯನ್ನು ರಥವಾಗಿ, ವೇದಗಳನ್ನು ರಥಾಶ್ವಗಳನ್ನಾಗಿ, ಸೂರ್ಯ, ಚಂದ್ರರನ್ನು ರಥದ ಚಕ್ರಗಳನ್ನಾಗಿ, ಮಿಂಚನ್ನು ಬಿಲ್ಲಾಗಿ ಮಾಡಿಕೊಳ್ಳಬೇಕೆಂತಲೂ, ಆದಿಶೇಷನನ್ನು ಬಿಲ್ಲಿನ ನಾಣಾಗಿಯೂ, ವಿಷ್ಣುಮೂರ್ತಿಯನ್ನು ನಾರಾಯಣಾಸ್ತ್ರವಾಗಿಯೂ ಉಪಯೋಗಿಸಿ ತ್ರಿಪುರ ಸಂಹಾರಮಾಡಬೇಕೆಂದು ನಿರ್ಧರಿಸಲಾಯಿತು. ಆ ಪ್ರಕಾರ ಶಿವನೇ ಮುಂದೆ ನಿಂತು ತ್ರಿಪುರಗಳನ್ನೂ ಹೊಡೆದನು. ಕೂಡಲೇ ಆ ಮೂರು ನಗರಗಳೂ ಸುಟ್ಟುಬೂದಿಯಾಗಿ ಭೂಮಿಯ ಮೇಲೆ ಉದುರಿದುವು. ಅದರಲ್ಲಿದ್ದ ರಾಕ್ಷಸರೂ ಬೂದಿಯಕಣಗಳಾದರು.

ತ್ರಿಪುರಾಸುರರು ನಾಶವಾಗಿ ಹೋದ ಮೇಲೆ ಜಲಂಧರನೆಂಬ ಮತ್ತೊಬ್ಬ ರಾಕ್ಷಸನು ಹೊರಟು ಲೋಕಗಳನ್ನು ಪೀಡಿಸ ತೊಡಗಿದನು. ಜಲಂಧರನ ನಿಜವಾದ ಹೆಸರು ಸೂಕರನೆಂದು. ಅವನು ಹಿರಣ್ಯಕಶಿಪುವಿನ ಹತ್ತನೆಯ ಮಗನಾದ ಅಗ್ನಿಜಿಹ್ವನ ಕುಮಾರ. ಅವನು ಬ್ರಹ್ಮನನ್ನು ಧ್ಯಾನಿಸಿ ಅತಿ ಘೋರವಾದ ತಪಸ್ಸನ್ನು ಮಾಡಿ, ದೇವಗಣಗಳಿಂದಾಗಲಿ, ರಾಕ್ಷಸಗಣಗಳಿಂದಾಗಲಿ, ನಾಗ, ಮಾನವ ಮೊದಲಾದವರಿಂದಾಗಲಿ, ತನಗೆ ಸಾವು ಬಾರದಂತೆಯೂ, ನೀರಿನೊಳಗೆ ವಾಸಮಾಡುವ ಶಕ್ತಿ ಬರುವಂತೆಯೂ ವರಗಳನ್ನು ಪಡೆದನು. ಆಮೇಲೆ ಅಷ್ಟ ದಿಕ್ಕುಗಳನ್ನೂ ಗೆದ್ದನು. ದೇವೇಂದ್ರನೇ ಮೊದಲಾದವರನ್ನು ಸ್ವರ್ಗದಿಂದ ಓಡಿಸಿ ಬಿಟ್ಟನು. ಹೀಗೆ ಸ್ವರ್ಗವನ್ನು ಆಕ್ರಮಿಸಿಕೊಂಡು ಆ ಜಲಂಧರನು ಮೂರು ಲೋಕಗಳಿಗೂ ತಾನೇ ಒಡೆಯನಾದನು.

ಜಲಂಧರನ ಮುಂದೆ ಸೋತು, ಕೈಲಾಸದಿಂದ ಶಿವನೂ, ವೈಕುಂಠದಿಂದ ವಿಷ್ಣುವೂ ಓಡಿ ಹೋಗಿ ಇಬ್ಬರೂ ಮಾನಸ ಸರೋವರದೊಳಗೆ ಅಡಗಿಕೊಂಡರು. ಅಲ್ಲಿ ಅವರಿಬ್ಬರೂ ಒಂದಾಗಿ ಮಾತಾಡಿಕೊಂಡು, ಪರಬ್ರಹ್ಮವನ್ನು ಧ್ಯಾನಿಸಿ ತಪಸ್ಸು ಮಾಡಲು, ಪರಬ್ರಹ್ಮ ಸ್ವರೂಪನು ಪ್ರತ್ಯಕ್ಷನಾಗಿ ಶಿವನಿಗೆ ತ್ರಿಶೂಲವನ್ನೂ, ವಿಷ್ಣುವಿಗೆ ಸುದರ್ಶನ ಚಕ್ರವನ್ನೂ ಕೊಟ್ಟು, "ನೀವು ಒಬ್ಬರ ಆಯುಧಗಳನ್ನು ಮತ್ತೊಬ್ಬರು ಉಪಯೋಗಿಸಿಕೊಂಡು ಜಲಂಧರನನ್ನು ಕೊಂದುಬಿಡಿರಿ" ಎಂದು ಹೇಳಿ ಅದೃಶ್ಯನಾದನು.

ಶಿವ ವಿಷ್ಣುಗಳು ಸಂತೋಷಪಟ್ಟು ತಮ್ಮ ಆಯುಧಗಳನ್ನು ಬದಲಾಯಿಸಿಕೊಂಡು, ಜಲಂಧರನನ್ನು ಇದಿರು ನೋಡ ತೊಡಗಿದರು.





# ತುಂಟಪಿಶಾಚಿಗಳು

ಒಂದು ಊರಿನಲ್ಲಿ ಅವತಾರಪ್ಪನೆಂಬವನು ಅಲ್ಪಸ್ವಲ್ಪ ವಿದ್ಯೆ ಕಲಿತು ಪಟ್ಟಣದಲ್ಲಿ ಉದ್ಯೋಗದ ಪ್ರಯತ್ನಗಳನ್ನು ಮಾಡಿ ತನ್ನ ಮನೆಗೆ ಹಿಂದಿರುಗಿ ಬಂದನು. ಬಂದ ಕೂಡಲೇ ಅವನ ಅವ್ವ ಅವನನ್ನು ನೋಡಿ, "ಏನಪ್ಪಾ ಅವತಾರೂ! ನನ್ನ ಆರೋಗ್ಯ ತುಂಬಾ ಕೆಟ್ಟಿತಪ್ಪ. ಏನೂ ಕೂಡದಾಗಿದೆ. ನನಗಂತೂ ಎಲ್ಲಿಗೆ ಹೋಗಲಿಕ್ಕೂ ಸಾಧ್ಯವಿಲ್ಲ. ನನ್ನ ಸೋದರ ಮಾವನಮಗಳು ಆದಿಲಕ್ಷ್ಮಿಗೆ ನಾಳೆ ಬೆಳಂಜಾಮದಲ್ಲಿ ತಾನೇ ಮದುವೇ ಮುಹೂರ್ತ? ನೀನೇ ಹೋಗಬೇಕು. ಆ ಸಂಗತಿ ನೆನಪೇ ಇಲ್ಲ ಏನಪ್ಪಾ?" ಎಂದಳು.

ಅವ್ವನ ಮಾತು ಕೇಳಿದ ಕೂಡಲೇ ಅವತಾರಪ್ಪನಿಗೆ ಬೆಚ್ಚಿಬಿದ್ದ ಹಾಗಾಯಿತು. ಆದಿಲಕ್ಷ್ಮಿ ಅವನಿಗಿಂತ ಎರಡು ವರ್ಷಕ್ಕೆ ದೊಡ್ಡವಳು. ಚಿಕ್ಕಂದಿನಲ್ಲಿ ಅವಳೊಂದಿಗೆ ಆಟಪಾಟಗಳನ್ನು ತುಂಬಾ ಆಡಿದ್ದಾನೆ. ತಾನು ಅವಳ ಮದುವೆಯ ದಿನವನ್ನು ಮರೆತೆ ಬಿಟ್ಟುದು ಅವನಿಗೇ ಆಶ್ಚರ್ಯವಾಯಿತು.

"ಅವ್ವಾ! ನೀನು ನೆನಪು ಮಾಡಿದ್ದು ಬಹಳ ಒಳ್ಳೇದಾಯಿತು. ಇಕೋ, ಮಾವಯ್ಯನ ಮನೆಗೆ ಈಗಲೇ ಹೊರಡುತ್ತೇನೆ. ಬೆಳಗಾಗುವುದರೊಳಗೆ ಮುಟ್ಟಬಹುದು" ಎಂದನು ಅವತಾರಪ್ಪ.

"ಈಗಲೇನಾ? ಈ ರಾತ್ರಿಯ ಹೊತ್ತಿನಲ್ಲಿಯಾ? ಬೇಡಪ್ಪಾ ಬೇಡ. ಬೆಳಂಜಾಮದಲ್ಲಿ ಹೋಗುವಿಯಂತೆ! ಅದರಿಂದೇನೂ ಪರ್ವಾಗಿಲ್ಲ" ಎಂದಳು ಅವ್ವ.

"ನೋಡವ್ವಾ, ಹೆಸರಿಗೆ ರಾತ್ರಿಯಾದರೂ ಮಲ್ಲಿಗೆ ಹೂಗಳ ರಾಶಿ ಚೆಲ್ಲಿದ ಹಾಗೆ ಹೇಗಿದೆ ಬೆಳದಿಂಗಳು! ಹಾಗೆ ಹೋಗಿ ಕಾಲುವೆಯ ಕಟ್ಟೆಹುಣಿ ಹಿಡಿದೆನೆಂದರೆ ಎರಡು ಗಂಟೆಯೊಳಗೆ ಮಾವಯ್ಯನ ಮನೆ ಮುಟ್ಟಿಬಿಡುತ್ತೇನೆ" ಎಂದು ಅವತಾರಪ್ಪನು ಗಬಗಬನೆ ಒಂದಿಷ್ಟು ಉಂಡು ಒಳ್ಳೆಯ ದುಸ್ತು ಧರಿಸಿಕೊಂಡು ಹೊರಟೇಬಿಟ್ಟನು.

ಅವನು ಕಾಲುವೆಯ ಕಟ್ಟೆಹುಣೆಯ ಮೇಲೆ ಬೇಗ ಬೇಗನೆ ನಡೆಯುವಾಗ ಸ್ವಲ್ಪಹೊತ್ತಿಗೆ ಕಟ್ಟೆಹುಣೆಯನ್ನಿಳಿದು ನಡೆಯಬೇಕಾದ ಜಾಗ ಬಂದಿತು. ಅಲ್ಲಿ ಕಟ್ಟೆಹುಣೆಯಿಂದ ಕೆಳಗಿಳಿದು ತಾಳೇಮರಗಳ ತೋಪಿನ ಕಾಲುದಾರಿಯಲ್ಲಿ ನಡೆಯಬೇಕು. ಅದನ್ನು ದಾಟಿದ ಮೇಲೆ ಮಾವಯ್ಯನ ಊರು ಬರುತ್ತದೆ.

ಎಂ. ಕೆ. ಈಶ್ವರರಾವ್



ಅವತಾರಪ್ಪನು ತಾಳೇ ತೋಪಿನ ನಡುವೆ ಸ್ವಲ್ಪ ದೂರ ನಡೆಯುವಷ್ಟರಲ್ಲಿ, ಹಠಾತ್ತಾಗಿ ಒಂದು ಮರದ ಮೇಲಿನಿಂದ ಎರಡು ಹೆಣ್ಣು ಪಿಶಾಚಿಗಳು ಕೆಳಗೆ ಧುಮುಕಿ ಅವನ ದಾರಿಯನ್ನು ಅಡ್ಡಗಟ್ಟಿ ಕೈಗಳನ್ನಾಡಿಸುತ್ತ ನಿಂತವು.

ಅವತಾರಪ್ಪನು ಸರ್ವಾಂಗದೊಂದಿಗೆ ನಡುಗಿದನು. ಆಗ ಪಿಶಾಚಿಗಳಲ್ಲಿ ಒಂದು, "ಎಲೋ ಮನುಷ್ಯಾ! ನಿನ್ನ ಅವತಾರ ನೋಡಿದರೆ ನೀನು ಧೈರ್ಯವಂತನೆಂದು ಯಾರಿಗೆ ಬೇಕಾದರೂ ಗೊತ್ತಾಗುತ್ತದೆ. ಮತ್ತೆ ಹೀಗೆ ಬಾಣದ ಪೆಟ್ಟು ಬಿದ್ದ ಹಕ್ಕಿಯ ಹಾಗೆ ನಡುಗಲಿಕ್ಕೇನಾಯಿತು? ಎಲ್ಲಿಗೆ ನಿನ್ನ ಪ್ರಯಾಣ ಈ ರಾತ್ರಿಯ ಸಮಯದಲ್ಲಿ?" ಎಂದು ಕೇಳಿತು.

"ಸೋದರಮಾವನ ಮಗಳು ಆದಿಲಕ್ಷ್ಮಿಯ ಮದುವೆಗೆ" ಎಂದನು ಅವತಾರಪ್ಪ ಇನ್ನಷ್ಟು ಹೆಚ್ಚು ಹೆದರುತ್ತ.

ಆ ಮಾತು ಕೇಳಿ ಪಿಶಾಚಿಗಳು ಮುಖ ಮುಖ ನೋಡುತ್ತಾ, "ಭಲೇ ಭಲೇ!" ಎಂದು ಕೇಕೇ ಹಾಕಿ ಕುಣಿದು, "ಆದಿಲಕ್ಷ್ಮಿಯೋ ಅನಂತ ಲಕ್ಷ್ಮಿಯೋ ನಮಗೆಲ್ಲಾ ಒಂದೇ! ನಾವೂ ಬರುತ್ತೇವೆ" ಎಂದುವು.

ಅದನ್ನು ಕೇಳಿದ ಮೇಲೆ ಅವತಾರಪ್ಪನಿಗೆ ಸ್ವಲ್ಪ ಧೈರ್ಯ ಬಂತು. "ಈ ಸಂಗತಿ ತಿಳಿದು ಬಿಟ್ಟರೆ ಮಾವಯ್ಯ ನನ್ನ ಚರ್ಮ ಸುಲಿದಾರು. ಮದುವೆಗೆ ಪಿಶಾಚಿಗಳನ್ನು ಕರೆದುಕೊಂಡು ಹೋಗುವುದುಂಟೇ?" ಎಂದನು.

"ನೀನು ಕರೆದೊಯ್ಯದೇ ಹೋದರೆ ಈಗಲೇ ನಾವೇ ನಿನ್ನ ಚರ್ಮ ಸುಲೀತೇವೆ. ಏನು ಹೇಳುತ್ತೀ?" ಎಂದುವು ಪಿಶಾಚಿಗಳು.

ಈ ಪಿಶಾಚಿಗಳು ಬಿಡಲಾರವೆಂದುಕೊಂಡು ಅವತಾರಪ್ಪನು, "ಸರಿ ಸರಿ, ನಿಮ್ಮ ಕೈಯಲ್ಲಿ ಇಲ್ಲಿಯೇ ಚರ್ಮ ಸುಲಿಸಿಕೊಳ್ಳುವುದಕ್ಕಿಂತ ಆದಿಲಕ್ಷ್ಮಿಯ ಮದುವೆಯನ್ನು ಕಣ್ಣು ತುಂಬಾ ನೋಡಿ ಮಾವಯ್ಯನ ಕೈಯಲ್ಲಿ ಚರ್ಮ ಸುಲಿಸಿಕೊಳ್ಳುವುದೇ ಮೇಲು. ನೀವು ನನ್ನೊಂದಿಗೆ ಗುಟ್ಟಾಗಿ ಬರಲು ಸಾಧ್ಯವಿದ್ದರೆ ಒಳ್ಳೇದಿತ್ತು. ನಿಮ್ಮನ್ನು ನೋಡಿದರೆ ಇಲ್ಲದ ಪೀಕಲಾಟವಾದೀತು" ಎಂದನು.

"ಅದೆಲ್ಲಾ ನಮಗೆ ಬಿಡು. ಮುಂದೆ ನೀನು ದಾರಿ ಹಿಡಿ" ಎಂದುವು ಪಿಶಾಚಿಗಳು.

ಅವತಾರಪ್ಪನು ನಡೆಯತೊಡಗಿದನು. ಪಿಶಾಚಿಗಳು ಮತ್ತೆ ಅವನ ಕಣ್ಣಿಗೆ ಕಾಣಲಿಲ್ಲ. ಅವು ಮಾಯಾರೂಪದಲ್ಲಿ ತನ್ನೊಂದಿಗಿವೆ ಎಂದು ಅವನು ಅಂದುಕೊಂಡಿದ್ದನು.

ಅವತಾರಪ್ಪನು ಸೋದರಮಾವನ ಮನೆಯನ್ನು ಸಮೀಪಿಸುವಷ್ಟರಲ್ಲಿ, ಆ ಪಿಶಾಚಿಗಳೆರಡೂ ಅವನಿಗಿಂತ ಮುಂದೆ ಮದುವೆ ಚಪ್ಪರದ ಹತ್ತಿರ ಹೋಗಿ ಪಟ್ಟೆ ಸೀರೆಗಳಿಂದ, ಮೈತುಂಬ ನಗನಟ್ಟು ಧರಿಸಿ

ಕೊಂಡು ಒಳಗೆ ಪ್ರವೇಶಿಸಿಬಿಟ್ಟುದನ್ನು ಅವತಾರಪ್ಪನು ನೋಡಿದನು. ಯಾರಿಗೂ ಸಂದೇಹ ಬರಲಿಲ್ಲ.

ಇದನ್ನು ನೋಡಿ ಅವತಾರಪ್ಪನು ಭೀತಿಯಿಂದ ಪುನಃ ನಡುಗುತ್ತ, ಮದುವೇ ಚಪ್ಪರದೊಳಗಿಂದಾಗಿ ಮನೆ ಬಾಗಿಲಿನ ಹತ್ತಿರ ಹೋದಾಗ, ಅವನ ಮಾವ ಇದಿರು ಬಂದು, "ಏನಾಯಿತು ನಿನಗೆ ? ಹೀಗೆ ನಡುಗುವಿ ಏಕೆ ? ಸೌಖ್ಯವಾಗಿರುವಿ ತಾನೇ ? ನಾನು ಮದುವೇ ಕೆಲಸದ ಗಡಿಬಿಡಿಯಲ್ಲಿದ್ದೇನೆ. ನಡೆದು ಬಂದ ದಣಿವೆಯೇನೋ ? ಪಕ್ಕದ ಕೋಣೆಗೆ ಹೋಗಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೋ. ನಮ್ಮ ವೈದ್ಯನೂ ಮದುವೆಗೆ ಬಂದಾನು. ಬೇಕಾದರೆ ಅವನಿಂದ ಪರೀಕ್ಷೆ ಮಾಡಿಸೋಣ" ಎಂದು ಹೇಳಿ ಬೇಗ ಬೇಗನೆ ಅತ್ತ ಹೋದನು.

ಅವತಾರಪ್ಪನು ಕೋಣೆಗೆ ಹೋಗಿ ಒಂದು ಮೂಲೆಯಲ್ಲಿ ಚಾಪೆಯ ಮೇಲೆ ದಿಂಬು ಎಳೆದುಕೊಂಡು ಮಲಗಿದನು. ಅಷ್ಟರಲ್ಲಿ ಪಿಶಾಚಿಗಳೆರಡೂ ತಮ್ಮ ತಂಟೆಗಳನ್ನು ಪ್ರಾರಂಭಿಸಿದುವು.

ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಇದಿರಿನಲ್ಲಿದ್ದ ಒಂದು ಪ್ರತ್ಯೇಕ ಮನೆಯನ್ನು ಏರ್ಪಡಿಸಿ ಕೊಟ್ಟಿದ್ದರು.

ಪಿಶಾಚಿಗಳಲ್ಲಿ ಒಂದು ಮದುಮಗನ ತಾಯಿಯ ಹಾಗೆ ರೂಪ ಬದಲಾಯಿಸಿಕೊಂಡು, ಮದುಮಗಳಿರುವ ಕೋಣೆಗೆ ಹೋಯಿತು.

ಬರಲಿರುವ ಬೀಗರವಳನ್ನು ನೋಡಿ ಆದಿಲಕ್ಷ್ಮಿಯ ತಾಯಿ ಎದ್ದು ನಿಂತು ಗೌರವದಿಂದ "ಬನ್ನಿ ಬನ್ನಿ ! ಅತ್ತಿಗೇಮ್ಮ ! ಬನ್ನಿ !" ಎಂದು ಸ್ವಾಗತ ಮಾಡಿದಳು.

"ನೀವು ಕೊಡುವ ಬಳುವಳಿ ಭಕ್ಷ್ಯಗಳು ಎಷ್ಟು ದೊಡ್ಡ ರೀತಿಯದೆಂದು ಒಂದುಸಾರಿ ನೋಡಿ ಹೋಗುವಾಂತ ಬಂದೆ" ಎಂದಿತು ಪಿಶಾಚಿ.

ಅಲ್ಲಿ ಮೂಲೆಯಲ್ಲಿ ಬುಟ್ಟಿಯೊಳಗಿದ್ದ ಲಡ್ಡುಗಳು, ಸುಖಿನುಂಡೆಗಳು, ಚಕ್ಕುಲಿ, ಪಂಚಕಜ್ಜಾಯ ಮುಂತಾದುವನ್ನೆಲ್ಲಾ ಆದಿಲಕ್ಷ್ಮಿಯ ತಾಯಿ ಪಿಶಾಚಿಗೆ ತೋರಿಸಿದಳು.





ಪಿಶಾಚಿ ಸ್ವಲ್ಪ ಪಂಚಕಜ್ಜಾಯವನ್ನು ಕೈಯಲ್ಲಿ ತೆಗೆದು ಬಾಯಿಗೆ ಹಾಕಿಕೊಂಡು, "ಈ ದರಿದ್ರದ ಕಜ್ಜಾಯ ನಿಮ್ಮ ಮಗಳ ಬಣ್ಣದ ಹಾಗೇ ಇದೆ. ತುಂಬ ಹಳೇ ಬೆಲ್ಲ! ಇಂಥಾ ಬೆಲ್ಲ ಎಲ್ಲಿಂದ ಸಿಕ್ಕಿತಪ್ಪಾ" ಎಂದಿತು.

ಆ ಮಾತು ಕೇಳಿ ಆದಿಲಕ್ಷ್ಮಿಗೂ ಅವಳ ತಾಯಿಗೂ ಚಿವ್ವಕ್ಕನೆ ಮನಸ್ಸು ನೊಂದಿತು.

ಆಮೇಲೆ ಪಿಶಾಚಿ. ಸುಖಿಸುಂಡೆ. ಲಡ್ಡುಗಳನ್ನು ಚೂರು ಚೂರು ಬಾಯಿಗೆ ಹಾಕಿ ಚೆನ್ನಾಗಿಲ್ಲವೆಂದು ಅಡ್ಡ ಹೆಸರುಗಳನ್ನಿಟ್ಟು "ಸರಿ ಸರಿ. ಈಗ ಎರಡು ಗಟಾರಗಳಲ್ಲಿ ಪೊಂಗಲು. ಪುಳಿಯೋಗರೆ ನಮಗೆ ಕಳಿಸಿರಿ" ಎಂದಿತು.

ಆದಿಲಕ್ಷ್ಮಿಯ ತಾಯಿ. "ಅವಕ್ಕೆ ಅಷ್ಟು ಅವಸರ ವೇನು? ತಣ್ಣಗಾಗಿ ಹೋದರೆ ಚೆನ್ನಾಗಿರೋ ದಿಲ್ಲಪ್ಪ? ಸಮಯಕ್ಕೆ ಎಲ್ಲಾ ತಯಾರಿಸಿ ಕಳಿಸುತ್ತೇವೆ ಅತ್ತಿಗೆ!" ಎಂದಳು.

"ನಮ್ಮ ಮನೆಗೆ ಬರುವ ಹುಡುಗಿ ತಣ್ಣಗಿದ್ದದ್ದೂ ತಂಗಳಾದ್ದೂ, ಹಳಸಿದ್ದೂ ಎಲ್ಲಾ ತಿನ್ನುವ ಅಭ್ಯಾಸ ಮಾಡಿಕೋ ಬೇಕಮ್ಮ. ಈ ಲಡ್ಡುಗಳೆಲ್ಲ ಹುಳ್ಳಗೆ ಕಂಪು ಬರಲು ಎಂಟು ಹತ್ತು ದಿನ ಬೇಕು. ಅಷ್ಟರ ವರೆಗೆ ಪೊಂಗಲೂ, ಪುಳಿಯೋಗರೆ ತಿನ್ನುತ್ತಾಳೆ ನಿಮ್ಮ ಹುಡುಗಿ. ನಾನು ಕೇಳೋದೆಲ್ಲಾ ನಿಮ್ಮ ಮಗಳು ತಿನ್ನೋದಕ್ಕೇ!" ಎಂದಿತು ಪಿಶಾಚಿ.

ಗೌರೀ ಪೂಜೆಗೆ ಸಿದ್ಧಳಾಗುತ್ತಿದ್ದ ಆದಿಲಕ್ಷ್ಮಿಗೆ ಆ ಮಾತುಗಳನ್ನು ಕೇಳಿದ ಕೂಡಲೇ ದೊಡ್ಡ ಗೆರಟೇ ಸೌಟಿನಿಂದ ಹೊಟ್ಟೆಯೊಳಗೆ ಮಗುಚಿದ ಹಾಗಾಯಿತು. ಅವಳು ಹಿಂಬದಿಗೆ ಓಡಿ ಹೋಗಿ ಬಳಕ್ಕನೆ ಒಂದಿಷ್ಟು ವಾಂತಿ ಮಾಡಿದಳು.

ಅವಳ ತಾಯಿ ಗಾಬರಿಯಾಗಿ ಗಡಿಬಿಡಿಯಿಂದ ಮಗಳ ಹಿಂದೆಯೇ ಓಡಿದಳು. ಕೂಡಲೇ ಪಿಶಾಚಿ ರೂಪ ಬದಲಾವಣೆ ಮಾಡಿಕೊಂಡು ಆ ಕೋಣೆಯಿಂದ ಹೊರಗೆ ಹೋಯಿತು.

ಆದಿಲಕ್ಷ್ಮಿ ತಣ್ಣೀರಿನಲ್ಲಿ ಮುಖ ತೊಳೆದುಕೊಂಡು "ನನ್ನ ಕೊರಳಿನಲ್ಲಿ ಜೀವವಾಡುತ್ತಿರುವಾಗ ಈ ಮದುವೆ ಮಾಡಿಕೊಳ್ಳಲಾರೆ!" ಎಂದಳು ಹಲ್ಲು ಕಚ್ಚಿಕೊಂಡು ತಾಯಿಯೊಂದಿಗೆ.

ಆ ಮಾತು ಕೇಳಿ ಅವಳ ತಾಯಿ ಇನ್ನಿಷ್ಟು ಗಾಬರಿಯಾಗಿ ಗಂಡನನ್ನು ಹುಡುಕಲು ಓಡಿದಳು.

ಇನ್ನು ಎರಡನೇ ಪಿಶಾಚಿ ಮದುಮಗನ ಬಿಡಾರದ ಮನೆಗೆ ಹೋಯಿತು. ಮದುವೆಯ ಜವಾಬ್ದಾರೀ ಕೆಲಸಗಳೆಲ್ಲಾ ಹೆಣ್ಣಿನ ಕಡೆಯವರದೇ ಆದುದರಿಂದ ಗಂಡಿನ ಕಡೆಯವರೆಲ್ಲಾ ತೂಕಡಿಸಿಕೊಂಡಿದ್ದರು. ಮದುಮಗನೊಬ್ಬನೇ ಮಾಳಿಗೆಯ ಮೇಲೆ ಬಿದ್ದುಕೊಂಡು ಸೊಳ್ಳೆಗಳ ಕಾಟದಿಂದ ಬಾಧೆಪಡುತ್ತಿದ್ದನು.

ಪಿಶಾಚಿ ಮದುಮಗಳ ಹಾಗೆ ರೂಪ ಬದಲಾಯಿಸಿಕೊಂಡು ಕೈಯಲ್ಲೊಂದು ಬೀಸಣಿಕೆಯೊಂದಿಗೆ ಅವನ ಬಳಿಗೆ ಹೋಯಿತು.

ಅವಳನ್ನು ನೋಡಿ ಮದುಮಗನು ಆಶ್ಚರ್ಯ ಪಡುತ್ತ, "ಹೀಗೆ ಬಂದೆ ಏಕೆ? ಏನಾಯಿತು ನಿನಗೆ? ಯಾರಾದರೂ ನೋಡಿದರೆ ನಗೋದಿಲ್ವೇ?" ಎಂದನು.

"ಹಾಗೆ ನಕ್ಕರೆ ನನಗೂ ನೆಗಾಡಲಿಕ್ಕೆ ಗೊತ್ತಿದೆ. ಇಲ್ಲಿ ನಿಮಗೆ ವಿಪರೀತ ಸೊಳ್ಳೆಯ ಉಪದ್ರ ಅಂದುಕೊಂಡು ಬಂದೆ. ನಮ್ಮ ಊರಿನ ಸೊಳ್ಳೆಗಳು ಹುಲಿದುಂಬಿಗಳನ್ನು ಕೂಡಾ ಅಟ್ಟಿಸಿಕೊಂಡು ಹೋಗಿ ಕಚ್ಚುವಂಥವು!" ಎನ್ನುತ್ತಾ ಪಿಶಾಚಿ ಬೀಸಣಿಗೆಯ ಹಿಡಿಕೆಯಿಂದ ಮದುಮಗನ ಕೈ ಮೇಲೆ ಬಲವಾಗಿ ಹೊಡೆದಳು.

ಮದುಮಗನು "ಅಯ್ಯಪ್ಪೋ" ಎಂದು ಸುಮ್ಮನಾದನು. ಪಿಶಾಚಿ ಅವನನ್ನು ಬಿಡದೆ "ಇಲ್ಲೊಂದು ಸೊಳ್ಳೆ, ಅಲ್ಲೊಂದು, ಇಕೋ ಇಲ್ಲಿ" ಎನ್ನುತ್ತಾ ಅವನ ಶರೀರದ ಮೇಲೆಲ್ಲಾ ಹೊಡೆಯ ತೊಡಗಿದಳು.

ಅದರಿಂದ ಸಹನೆ ಕಳೆದುಕೊಂಡ ಮದುಮಗನು, "ಇನ್ನು ಸಾಕು ಸುಮ್ಮನಿರು!" ಎನ್ನುತ್ತಾ ಪಿಶಾಚಿಯ ಕೈಯಲ್ಲಿದ್ದ ಬೀಸಣಿಗೆಯನ್ನು ಎಳೆದುಕೊಂಡನು.

ಪಿಶಾಚಿ ಕಣ್ಣೀರು ಒರೆಸಿಕೊಳ್ಳುವಂತೆ ನಟಿಸುತ್ತ, "ಸೊಳ್ಳೆಗಳನ್ನು ಹೊಡೆಯುವ ಈ ಸಣ್ಣ ಪೆಟ್ಟುಗಳನ್ನೇ ತಡೆಯಲಾಗದೆ ಇಷ್ಟು ಕೋಪ ತಂದುಕೊಳ್ಳೀರಿ! ಮದುವೆಯಾದ ಮೇಲೆ ನಾನು ಎಷ್ಟು ಹೊಡೆಯಲಿಕ್ಕಿದೆಯೋ. ಏನೋ! ಹೇಗೆ ತಾಳಿಕೊಳ್ಳೀರೋ!" ಎಂದಳು.

"ಏನಂದಿ? ಮದುವೆಯಾದ ಮೇಲೆ ನನ್ನನ್ನು ಹೊಡೆಯುವಿಯಾ?" ಎಂದನು ಮದುಮಗ ಬೆರಗಾಗಿ.

"ನಿಮ್ಮ ಅಡಿಗೆ ಹಿಡಿಸದಿದ್ದರೆ ಸುಮ್ಮನೆ ಬಿಡುವೆನೆಂದುಕೊಂಡಿರೇನು?" ಎಂದಿತು ಪಿಶಾಚಿ.



"ನಾನು ಅಡಿಗೆ ಮಾಡಬೇಕೇನು?" ಎಂದನು ಮದುಮಗ ಕೋಪದಿಂದ.

"ಮತ್ತೇನು? ಮುಸುರೆ ತಿಕ್ಕಿ ಕೈ ತೊಳೆದುಕೊಂಡರೆ ಆಯಿತೆಂದುಕೊಂಡಿರಾ? ಸುಮ್ಮನೆ ಬಿಟ್ಟೇನೇ? ಮನೆಯ ಕಸಬಳಿದು, ಬಟ್ಟೆಬರೆ ಒಗೆದು ಚಿಲ್ಲರೆಪಲ್ಲರೆ ಕೆಲಸಗಳನ್ನೆಲ್ಲಾ ಮಾಡಬೇಕು. ಈಗಲೇ ಹೇಳಿದ್ದೇನೆ" ಎಂದಿತು ಪಿಶಾಚಿ.

ಮದುಮಗನು ಎದ್ದುನಿಂತು, "ನಿನಗೆ ಬೇಕಾದವನು ಗಂಡನಲ್ಲ, ಕೆಲಸದಾಳು!" ಎಂದು ಹೇಳಿ ಬೇಗ ಬೇಗನೇ ಮಾಳಿಗೆಯಿಂದಿಳಿದು, ತಂದೆ ತಾಯಿಯರ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲ ಹೇಳಿ, "ನಾನು ಸತ್ತರೂ ಆ ಪಿಶಾಚೀ ಹುಡುಗೀನ ಮದುವೆ ಮಾಡಿಕೊಳ್ಳಲಾರೆ!" ಎಂದನು.

ಮರುಕ್ಷಣದಲ್ಲೇ ಅತ್ತ ಮದುಮಗಳೂ, ಇತ್ತ ಮದುಮಗನೂ ಈ ಮದುವೆಗೆ ಒಪ್ಪುವುದಿಲ್ಲವೆಂಬ ಸಂಗತಿ ಹತ್ತು ಮಂದಿಗೆ ತಿಳಿದು ಗಲಿಬಿಲಿ ಎದ್ದಿತು.

ಆ ಕಡೆಯು ಈ ಕಡೆಯು ಬಂಧುಗಳು "ಇದೇನಿದು? ಬೊಂಬೆಗಳಾಟವೆಂದುಕೊಂಡಿರಾ? ಈಗೇನಾಯಿತು? ಸ್ಪಷ್ಟವಾಗಿ ಹೇಳಿಬಿಡಿರಿ." ಎಂದು ಎರಡು ಕಡೆಯವರನ್ನೂ ಕರೆದು ಕೇಳಿದರು.

"ಎಂಥಾ ಸುಳ್ಳು! ರಾತ್ರಿ ಊಟವಾದ ಮೇಲೆ ನಾನು ಹುಡುಗೀ ಮನೆಗೆ ಹೋಗಲೇ ಇಲ್ಲ!" ಎಂದು ಮದುಮಗನ ತಾಯಿ ಕಣ್ಣರಳಿಸಿ ಹೇಳಿದಳು.

"ಇವಳಂಥ ಸುಳ್ಳುಗಾರ್ತಿ ಪ್ರಪಂಚದಲ್ಲೇ ಇರಲಿಕ್ಕಿಲ್ಲ. ಸ್ವಲ್ಪ ಮೊದಲು ನಮ್ಮ ಬಳಿಗೆ ಬಂದು ತಿಂಡಿಬಾಕ ಭೂತದ ಹಾಗೆ ಮಾತಾಡಿದ್ದಾಳೆ" ಎಂದಳು ಹೆಣ್ಣಿನ ತಾಯಿ.

"ಮದುಮಗಳಾ ಅವಳು! ಮಹಾ ಲಂಕಿಣಿ! ಮದುವೆ ಮಾಡಿಕೊಂಡು ಗಂಡನ ಕೈಯಿಂದ ಚಾಕರೀ ಮಾಡಿಸಿಕೊಳ್ತಾಳಂತೆ. ಮಹಾರಾಣಿ!" ಎಂದರು ಗಂಡಿನ ಕಡೆಯವರು.

ಆ ಮಾತು ಕೇಳಿ ಮದುಮಗಳು ಆದಿಲಕ್ಷ್ಮಿಗೆ ಆಶ್ಚರ್ಯವಾಯಿತು. ಗಂಡಿನ ಕಡೆಯವರಿಗೂ ಹೆಣ್ಣಿನ ಕಡೆಯವರಿಗೂ ಒಬ್ಬರು ಹೇಳಿದ್ದು ಒಬ್ಬರಿಗೆ ಅರ್ಥವಾಗದೆ ಗಲಿಬಿಲಿಯಾಗ ತೊಡಗಿದರು. ಪಿಶಾಚಿಗಳು ತಾವು ಆಡಿದ ನಾಟಕವು ಚೆನ್ನಾಗಿ ಕಳೆ ಕಟ್ಟಿತೆಂದು ನಗುತ್ತ ಕುಣಿದಾಡುತ್ತಿದ್ದುವು. ಹಾಗೆ ಸ್ವಲ್ಪ ಹೊತ್ತು ನಡೆದ ಮೇಲೆ ಬೇಸತ್ತು ಹೋದ ಹುಡುಗಿಯ ತಂದೆಗೆ ಅವತಾರಪ್ಪನ ನೆನಪು ಬಂತು. ಅವನೇಕೆ ಕಾಣುವುದಿಲ್ಲ?

ಅವನು ಅವತಾರಪ್ಪನು ಇರುವ ಕೋಣೆಗೆ ಬಂದು, ಅವನ ಶರೀರವೆಲ್ಲಾ ಬೆವತು ಒದ್ದೆಯಾಗಿರುವುದನ್ನು ಗಮನಿಸಿ, ಉಳಿದವರನ್ನು ನೋಡಿ, "ಓಹೋಯ್! ಯಾರಾದರೂ ಹೋಗಿ ವೈದ್ಯ ಆಂಜನೇಯನನ್ನು ಕರೆದುಕೊಂಡು ಬನ್ನಿರಪ್ಪಾ!" ಎಂದನು. "ಚಪ್ಪರದಲ್ಲಿ ಅವನನ್ನು ನೋಡಿದ್ದೇವೆ. ಕರೆಯಿರಿ! ಓಯ್, ಆಂಜನೇಯಾ" ಎಂದು ಕೆಲವರು ಗಟ್ಟಿಯಾಗಿ ಕೂಗಿದರು.

ಆ ಊರಿನಲ್ಲಿ ಆಂಜನೇಯನೇ ಹೆಸರಾಂತ ವೈದ್ಯ. ಆಂಜನೇಯನ ಹೆಸರು ಕೇಳುತ್ತಲೇ ನಗನಟ್ಟು ಪಟ್ಟೇ ಸೀರೆಗಳಿಂದಿದ್ದ ಪಿಶಾಚಿಗಳೆರಡೂ ಕೆಟ್ಟದನಿಯಿಂದ ವಿಕಾರವಾಗಿ ಕೂಗಿ ಕರೀ ಬೆಕ್ಕುಗಳಾಗಿ ಮಾರ್ಪಟ್ಟು ಕತ್ತಲೆಯಲ್ಲಿ ಎತ್ತಲೋ ಓಡಿಹೋದುವು. ಅದನ್ನು ನೋಡಿ ಕೆಲವರಿಗೆ ಆಶ್ಚರ್ಯವಾಯಿತು. ಮತ್ತೆ ಕೆಲವರಿಗೆ ವಿಪರೀತ ನಗು ಕೂಡಾ ಬಂತು.

ಆಮೇಲೆ ಅವತಾರಪ್ಪನ ಮೂಲಕ ಎಲ್ಲರಿಗೂ ನಡೆದ ಸಂಗತಿ ಏನೆಂದು ಗೊತ್ತಾಯಿತು. ಇವಕ್ಕೆಲ್ಲ ಕಾರಣ ಆ ತುಂಟ ಪಿಶಾಚಿಗಳೇ ಎಂದು ಎಲ್ಲರಿಗೂ ತಿಳಿಯಿತು. ಅನಂತರ ಯಾವ ವಿಘ್ನವೂ ಇಲ್ಲದೆ ಆದಿಲಕ್ಷ್ಮಿಯ ವಿವಾಹವು ಸಾಂಗವಾಗಿ ನೆರವೇರಿತು.



# ಆಫ್ರಿಕಾ ಜಿಂಕೆಗಳು

ಜಿಂಕೆಯ ಜಾತಿಯ ಪ್ರಾಣಿಗಳಲ್ಲಿ ಆಕಾರದಲ್ಲಿ ದೊಡ್ಡದಾದುವುಗಳು ಆಫ್ರಿಕಾ ಜಿಂಕೆಗಳೇ. ಪಂದ್ಯದ ಕುದುರೆಗಳಂತೆ ಓಡಬಲ್ಲ ಈ ಜಿಂಕೆಗಳನ್ನು ಪಳಗಿಸಿ ಆಫ್ರಿಕಾದಲ್ಲಿ ಸಾಕು ಪ್ರಾಣಿಗಳ ಹಾಗೆ ಬೆಳೆಯಿಸುತ್ತಾರೆ.

ದೊಡ್ಡ ಆಕಾರ, ಡೊಂಕುಗಳಿಂದ ನೀಟಾಗಿರುವ ಅವುಗಳ ಕೊಂಬುಗಳು, ಗಂಗೆದೊಗಲು, ಮುಖದಲ್ಲಿ, ಭುಜಗಳಲ್ಲಿ ಕುಚ್ಚುಕುಚ್ಚಾಗಿ ಒತ್ತೊತ್ತಾದ ಕೂದಲುಗಳು, ಎತ್ತಿನ ಬಾಲದಂತಹ ಬಾಲವಿರುವ ಈ ಆಫ್ರಿಕಾ ಜಿಂಕೆಗಳು ಎಲೆ-ಸೊಪ್ಪುಗಳನ್ನು ತಿಂದು ಬದುಕುತ್ತವೆ. ವಯಸ್ಸಿಗೆ ತಕ್ಕ ಹಾಗೆ ಇವುಗಳ ಶರೀರದ ಬಣ್ಣ ಬದಲಾಯಿಸುತ್ತಾ ಇರುತ್ತದೆ. ಸಾಧಾರಣವಾಗಿ ನೀಲಿ ಬೆರೆತ ಊದಾ ಬಣ್ಣದಲ್ಲಿರುತ್ತವೆ.

ಆಫ್ರಿಕಾ ಮರುಭೂಮಿಯ ಪ್ರಾಂತದಲ್ಲಿಯೂ, ಬೆಟ್ಟ ಗುಡ್ಡಗಳ ಪ್ರಾಂತದಲ್ಲಿಯೂ ಇವು ಕಾಣಿಸಿದರೂ, ಈ ಜಿಂಕೆಗಳು ಹಸಿರು ಸಮೃದ್ಧಿಯಾಗಿ ಲಭಿಸುವ ಮೈದಾನಗಳ ಸಮೀಪದ ಕಾಡುಗಳಲ್ಲಿಯೇ ಹೆಚ್ಚಾಗಿರುತ್ತವೆ.

ಹಗಲೆಲ್ಲಾ ಅಡವಿಗಳಲ್ಲಿ ಕಾಲ ಕಳೆಯುವ ಈ ಜಿಂಕೆಗಳು ರಾತ್ರಿಯಲ್ಲಿ ಬೆಳಂಜಾಮದ ಹೊತ್ತಿಗೆ ಮೈದಾನಗಳಿಗೆ ಬಂದು ಅಲ್ಲಿಯ ತಟಾಕಗಳಲ್ಲಿ ನೀರು ಕುಡಿದು ಹೋಗುತ್ತವೆ. ಈ ಜಿಂಕೆಗಳು ಐವತ್ತರಿಂದ ನೂರರವರೆಗೂ ಗುಂಪು ಗುಂಪಾಗಿ ಬದುಕುತ್ತವೆ. ಗಂಡು ಜಿಂಕೆಗಳು ಮಾತ್ರ ಒಂದೆರಡು ಒಂಟಿಗಳಾಗಿಯೂ, ಚಿಕ್ಕ ಚಿಕ್ಕ ಗುಂಪಾಗಿಯೂ ತಿರುಗಾಡುತ್ತವೆ.

ಇವುಗಳ ಶರೀರವು ದೊಡ್ಡದಾಗಿರುವುದರಿಂದ ಇತರ ಪ್ರಾಣಿಗಳೊಂದಿಗೆ ಹೋಲಿಸಿದರೆ ಈ ಜಿಂಕೆಗಳು ಸ್ವಲ್ಪ ಜಡವಾಗಿ ಕಾಣುತ್ತವೆ. ಆದರೂ ಅಗತ್ಯ ಬಿದ್ದಾಗ ಆಕಾಶದಲ್ಲಿ ಹಾರುವಂತೆ ಬಹಳ ಎತ್ತರದವರೆಗೆ ಹಾರುತ್ತ ಓಡಬಲ್ಲವು. ಆಫ್ರಿಕಾದ ಕಟ್ಟಡವಿಗಳಲ್ಲಿ ಮಂದೆ ಮಂದೆಗಳಾಗಿ ಈ ಜಿಂಕೆಗಳು ಪಂದ್ಯದ ಕುದುರೆಗಳಂತೆ ಮರಗಳ ಪೊದರುಗಳನ್ನೂ, ಕಾಲುವೆಗಳನ್ನೂ ದಾಟುತ್ತ ಓಡುವ ದೃಶ್ಯ ನೋಡಲು ಬಹಳ ಆಹ್ಲಾದಕರವಾಗಿರುತ್ತದೆ.

ಸಾಧಾರಣವಾಗಿ ಪುಷ್ಕಲಾಗಿ ಕಾಣುವ ಈ ಪ್ರಾಣಿಗಳು ಆಪತ್ತು ಬಂದಾಗ ತಮ್ಮ ಮಕ್ಕಳನ್ನು ಕಾಪಾಡಲು ಹರಿತವಾದ ಗಟ್ಟಿ ಕೊಂಬುಗಳನ್ನೇ ಆಧಾರ ಮಾಡಿಕೊಂಡು ಹೋರಾಡುತ್ತವೆ. ಈ ಜಿಂಕೆಗಳು ಎರಡು ವರ್ಷಗಳಿಗೊಮ್ಮೆ ಮಾತ್ರವೇ ಈನುತ್ತವೆ. ಆದುದರಿಂದ ಇವುಗಳ ಅಭಿವೃದ್ಧಿ ಮಿತವಾಗಿಯೇ ಇರುತ್ತದೆ.

ಒಂದು ಕಾಲದಲ್ಲಿ ಆಫ್ರಿಕಾದ ದಕ್ಷಿಣ-ಪೂರ್ವ ಪ್ರಾಂತಗಳಲ್ಲಿ ವಿಸ್ತಾರವಾಗಿ ಕಂಡುಬಂದ ಈ ಜಿಂಕೆಗಳ ಸಂಖ್ಯೆ ದಿನದಿನಕ್ಕೆ ಕಡಿಮೆಯಾಗುತ್ತದೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೬ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



M Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ನವೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಶುಭ್ರತೆಯಿಂದ ಪ್ರಾರಂಭವಾಗುತ್ತೆ

ಎರಡನೇ ಫೋಟೋ : ಹಬ್ಬದ ಅಬ್ಬರದ ಪ್ರಕಾಶ

ಕಳುಹಿಸಿದವರು : ಜ್ಯೋತ್ಸ್ನಾ ಹೊಡೆ, ಕೆ. ಪಿ. ಸಿ. ಕಾಲೊನಿ, ಉ. ಕನ್ನಡ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ? ಉತ್ತರಗಳು :

೧. ಕೃಷ್ಣಾ ನದಿ. ೨. ಯಮುನಾ. ೩. ತಪತೀ. ೪. ಕೋಸೀ ನದಿ. ೫. ಚಂಬಲ್ ನದಿ.

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.